ಣಿಗಳನ್ನು ನಾವೇ ಕೊಂದ ಹಾಗೆ ಆಯಿತು, ಆದರಿಂದ ದುರ್ಜನರಿಗೆ ಶಿಕ್ಷೆಯ ಮಾಡ ಬೇಕು, ಅದೆಂತೆನೆ—

## ೮ನೇ ಕಥೆ.

### ಉಪಕಾರವನ್ನರಿಯದ ಮೊಸಳೆ ಕೆಟ್ಟದ್ದು.

ಯಮುನಾತೀರದಲ್ಲು ಅಗ್ನಿಸ್ಥಳವೆಂಬುದೊಂದು ಅಗ್ರಹಾರದಲ್ಲು ಆಸ್ತಿಕನೆಂಬ ವಿಪ್ರಂ ಕಾಶಿಯಾತ್ರೆ ಹೋಗುತ್ತ, ಒಂದು ತಟಾಕಮಂ ಕಂಡು, ತನ್ನ ನಿತ್ಯ ಕರ್ಮಾನುಷ್ಠಾನಮಂ ತಿದ್ದಿ ಕೊಳುತ್ತಿರಲು; ಅಲ್ಲಿ ಕ್ರೋಧಕನೆಂಬ ಮೊಸಳೆಯು ಈ ಬ್ರಾಹ್ಮಣನಂ ಕಂಡು, ಕೊಂಡಾಡಿ, ಮಹಾ ಸ್ತುತಿ ಗೈದು, ನೀನು ಎಲ್ಲಿಗೆ ಹೋಗುವಿಯೆಂದು, ಬೆಸಗೊಳಲು; ನಾನು ವಾರಣಾಶಿಗೆ ಹೋದೇನೆನಲು; ಎಲೇ ಬ್ರಾಹ್ಮಣೋತ್ತಮಾ, ನನ್ನನ್ನು ಕೊಂಡು ಹೋಗಿ ಆ ನದಿಯಲ್ಲು ಬಿಟ್ಟರೆ ನಿನಗೆ ಮಹಾ ಪುಣ್ಯವೆಂದು, ದೈನ್ಯಂ ಬಡಲು; ಆ ಬ್ರಾಹ್ಮಣನು ಮಹಾ ಕರುಣದಿಂದ ಆ ಮೊಸಳೆಯನ್ನು ಒಂದು ಚೀಲದೊಳಗೆ ಕಟ್ಟಿ, ಹೊತ್ತುಕೊಂಡು, ಕೆಲವು ದಿವಸಕ್ಕೆ ಕಾಶಿಯ ಪಟ್ಟಣಮಂ ಶೇರಿ, ಆ ನದಿಯಲು ಆ ಮೊಸಳೆಯನ್ನು ಬಿಡಲು; ಅಲ್ಲಿಯೇ ಆ ಮೊಸಳೆಯು ಆ ಬ್ರಾಹ್ಮಣನ ಕಾಲಂ ಹಿಡಿದು, ಭಕ್ಷಿಸುವೆನೆನಲಾ ವಿಪ್ರಂ, ಉಪಕಾರ ಮಾಡಿದವಂಗೆ ಅಪಕಾರ ಮಾಡಿದವರುಂಟೇ? ಎಂದು ಕೇಳಲಾ ಮೊಸಳೆಯು, ರಕ್ಷಿಸಿದವರ ಭಕ್ಷಿಸಿಸುವುದೆಂಬುದಕ್ಕೆ ಸಾಕ್ಷಿಯ ನುಡಿಸಿ ಕೊಟ್ಟೇನು ಎನಲು; ಆ ವಿಪ್ರ—ಮೂವರು ಸಾಕ್ಷಿಗಾರರು ಏನ ಹೇಳ್ಯಾರು, ಹಾಗೆ ಕೇಳಿ ಕೊಂಡು, ಆ ಮೇಲೆ ನನ್ನನ್ನು ಭಕ್ಷಿಸು ಎನಲು; ಆ ನದಿಯ ತೀರದಲ್ಲು ಇದ್ದ ಒಂದು ಚೂತವೃಕ್ಷಮಂ ಕಂಡು, ಎಲೇ ವೃಕ್ಷರಾಜಾ, ಉಪಕಾರ ಮಾಡಿದವರಿಗೆ ಅಪಕಾರ ಮಾಡ ಬಾರದೇ? ಎನಲು; ಈ ಕಾಲಕ್ಕೆ ಇನ್ನೆಲ್ಲಿ ಉಪಕಾರವಿದ್ಧೀತು? ನಾನು ಸರ್ವರಿಗೂ ಉಪಕಾರ ಮಾಡಿದ ವೃಕ್ಷ; ನನ್ನನ್ನು ನಾನಾ ವಿಧಿ ಬಡಿಸಿ, ಸಕಲ ಜನರೆಲ್ಲಾ ಶಾಖೋಪಶಾಖೆಗಳನೆಲ್ಲಾ ಮುರಿದು, ಕಡಿದು, ಹಂಣು ಕಾಯಿಗಾಗಿ ಕಲ್ಲಿಟ್ಟು, ನಾನಾ ಉಪದ್ರಮಂ ಮಾಡುವರು; ಅದು ಕಾರ

ಣ ಈ ಕಾಲಕ್ಕೆ ಅಪಕಾರವನ್ನೇ ಮಾಡ ಬೇಕೆನಲು; ಮೊಸಳೆಯು ಮಹಾ ಸಂತೋಷಂ ಬಟ್ಟು, ಎಲೇ ಬ್ರಾಹ್ಮಣಾ, ಸಾಕ್ಷಿಗಳು ಆಡಿದ ಮಾತಂ ಕೇಳಿದಿಯಾ? ಎನಲು; ಇನ್ನಿಬ್ಬರು ಸಾಕ್ಷಿಗಾರರು ಇದೇ ರೀತಿ ನುಡಿದರೆ ನನ್ನನ್ನು ಭಕ್ಷಿಸು ಎನಲು; ಆ ಸಮಯದಲ್ಲು ಒಂದು ವೃದ್ಧವಾದ ಗೋವು ಬಂದು, ಉದಕಮಂ ಕೊಳುತ್ತಿರಲು; ಈ ಬ್ರಾಹ್ಮಣಂ ಕಂಡು—ಎಲೇ ಗೋತಾಯಿಯೊ, ನೀನು ಧರ್ಮವುಳ್ಳದ್ದು, ಉಪಕಾರಕ್ಕೆ ಅಪಕಾರ ಮಾಡಿದವರುಂಟೇ? ಎಂದು, ಕೇಳಲು; ಈ ಕಾಲದಲ್ಲಿ ಇನ್ನೆಲ್ಲಿ ಧರ್ಮವಿದ್ಧೀತು? ನಾನು ಒಬ್ಬ ಬ್ರಾಹ್ಮಣನ ಮನೆಯಲ್ಲಿದ್ದೆ, ಇಪ್ಪತ್ತು ಕಾಲವಾಯಿತು; ನನ್ನಿಂದ ಆತಂಗೆ ನೂರು ಇನ್ನೂರು ಗೋವುಗಳಾಗಿ, ಮಹಾ ಸಂಪನ್ನನಾದನು; ಆತಗೆ ಒಂದು ದಿನ ತನಗೆ ಮಹಾ ವ್ಯಾಕುಲವಾಗಿ ಕ್ಷೀರಮಂ ಕೊಡದಿರಲು ಒಂದು ದೊಣ್ಣೆಯಂ ತೆಗದುಕೊಂಡು, ನನ್ನ ಸೊಂಟವನ್ನು ಮುರಿಯ ಹೊಯಿದು, ಮನೆಯ ಹೊರಡಿಸಿದನು; ಅದರಿಂದ ನಾನು ಪರದೇಶಿಯಾಗಿ ತಿರುಗುತ್ತಿದ್ಧೇನೆ, ಈ ಕಾಲಕ್ಕೆ ಎಲ್ಲಿ ಧರ್ಮವಿದ್ಧೀತು? ಅದರಿಂದ ಉಪಕಾರಕ್ಕೆ ಅಪಕಾರವೇ ಮಾಡ ಬೇಕು ಎನಲು; ಮೊಸಳೆಯು ಮಹಾ ಸಂತೋಷಂ ಬಟ್ಟು, ಕೇಳಿದಿಯಾ, ಬ್ರಾಹ್ಮಣಾ? ಎಂದು, ಹೇಳಲಾಗಿ; ಇನ್ನೊಬ್ಬ ಸಾಕ್ಷಿಗಾರನು ಹೀಗೆ ನುಡಿದರೆ ನನ್ನನ್ನು ಭಕ್ಷಿಸು ಎನಲು; ಆ ವೇಳ್ಯದಲ್ಲು ನೀತಿಯುಕ್ತನೆಂಬ ಜಂಬುಕನು ಉದಕನಿಮಿತ್ತಂ ಬರಲು; ಈ ಬ್ರಾಹ್ಮಣಂ ಕಂಡು, ಎಲೇ ಜಂಬುಕರಾಜಾ, ಉಪಕಾರ ಮಾಡಿದವರಿಗೆ ಅಪಕಾರ ಮಾಡಿದವರುಂಟೇ? ಎನಲು; ಆ ಜಂಬುಕಂ ಗಹಗಹಿಸಿ ನಕ್ಕು—ಈ ಕಾಲಕ್ಕೆ ಕಂಡುದನಾಡಿದವರು ಮಹಾ ಕಷ್ಟರು; ಇದರಿಂ ಮೊಸಳೆರಾಜನು ತಪ್ಪುವನಲ್ಲ, ಮನುಷ್ಯರು ಮಹಾ ಕಪಟಿಗಳೆಂದು, ಬ್ರಾಹ್ಮಣನಂ ಜರದು, ಆವನಾನೊಬ್ಬ ಪ್ರಾಪ್ತನಾಗಿದ್ದವನು ನೀರೊಳಗೆ ಇದ್ದವರಿಗೆ ನ್ಯಾಯಮಂ ಹೇಳ ಬಾರದು, ನೀವಿಬ್ಬರು ನೀರು ಹೊರವಂಟು ಬನ್ನಿ! ಎನಲು; ಅವರಿಬ್ಬರು ಬಂದು, ಜಂಬುಕಂಗೆ ವಂದನೆಯಂಗೈದು, ನಿಂದು, ತಮ್ಮ ಪೂರ್ವ ವೃತ್ತಾಂತಮಂ ಪೇಳಲಾ ಜಂಬುಕಂ ಇಂತೆಂದುದು—ಎಲೇ ಬ್ರಾಹ್ಮಣಾ, ಇಂಥಾ ದೊಡ್ಡಿತಾದ ಮೊಸಳೆ

ಯನ್ನು ನೀನು ತಂದ ಪರಿ ಹ್ಯಾಗೆ? ಆ ಭಾವಮಂ ತೋರು! ಎನಲೀ ಬ್ರಾಹ್ಮಣಂ ಮುನ್ನಿನಂತೆ ಮೊಸಳೆಯನ್ನು ಚೀಲದಲ್ಲಿ ಕಟ್ಟಿ ಹಾಕಿ, ತಲೆಯ ಮೇಲೆ ಹೊತ್ತು ಕೊಂಡು, ಅರಣ್ಯಕ್ಕೆ ಹೋಗೆ; ಎಲೇ ಬ್ರಾಹ್ಮಣಾ, ನೀನು ಅಪ್ರಬುದ್ಧನು, ಇಂಥಾ ದುರ್ಜನನ ಕೂಡೆ ಸಂಗವ ಮಾಡ ಬಹುದೇ? ನಿನ್ನ ಪ್ರಾಣಕ್ಕೆ ಮುನಿಯಿತು ಎಂದು, ಹೇಳಿ, ಅದು ಕಾರಣಂ ಮೊಸಳೆಯಂ ಕೊಲ್ಲ ಬೇಕೆಂದು, ಆ ವಿಪ್ರನ ಕೈಯಿಂದ ದೊಡ್ಡ ಗುಂಡಂ ತಂದು ಆ ಚೀಲದ ಮೇಲೆ ಹಾಕಿಸಿ, ಆ ಮೊಸಳೆಯಂ ಕೊಲ್ಲಿಸಿ, ಮುಂದಕ್ಕೆ ಇಂಥಾ ದುರ್ಜನರ ಸಂಗ ಬೇಡೆಂದು, ಬುದ್ಧಿಯಂ ಹೇಳಿ, ಆ ವಿಪ್ರನಂ ಕಳುಪಿ, ಜಂಬುಕಂ ಮೊಸಳೆಯಂ ಭಕ್ಷಿಸಿ ಹೋಯಿತು.

## ೫ನೇ ಕಥೆಯ ಮೂರನೇ ಭಾಗ.

ಅದು ಕಾರಣ ದುರ್ಜನರಿಗೆ ಹಿತವ ಮಾಡ ಬಾರದೆಂದು, ಈ ಕಥೆಯಂ ಏಡಿಯು ಆ ಬ್ರಾಹ್ಮಣಗೆ ಹೇಳಿ, ಆ ಕಾಗೆಯಂ ಕೊಲಿಸಲು; ಈ ಬ್ರಾಹ್ಮಣಂ ಕಾಶಿಗೆ ಹೋಗಿ, ಆ ನದಿಯೊಳು ಏಡಿಯಂ ಬಿಟ್ಟು, ಸ್ನಾನವಂ ಮಾಡಿ, ತಾನು ಬಳಿಕ ಕಾವಡಿಯಂ ಕೊಂಡು, ತನ್ನ ಪುರಕ್ಕಂ ಬಂದು, ಸುಖದಿಂದಿರ್ದನು.

ಅದು ಕಾರಣದಿಂ ಇಬ್ಬರಾಗಿ ಹೋದ ಕಡೆಯಿಂದ ಬ್ರಾಹ್ಮಣನ ಜೀವ ಉಳಿಯಿತು; ಅದರಿಂದ ರಾಜಾಸ್ಥಾನಕ್ಕೆ ಒಬ್ಬನೇ ಹೋಗ ಬಾರದೆಂದು, ದಮನಕಂ ನಾನಾ ಪ್ರಕಾರದಿಂದೊಡಂಬಡಿಸಲು;

### 3. ದಮನಕ ಕರಟಕಗಳು ಪಿಂಗಲಕನೊಡನೆಯೂ ಸಂಜೀವಕನೊಡನೆಯೂ ಮಾತಾಡಿ ಅವರಿಗೆ ಮಿತ್ರತ್ವವನಿಕ್ಕಿದ್ದು.

ಆ ಕರಟಕನು ದಮನಕನಂ ಕೂಡಿ ಕೊಂಡು, ಈರ್ವರೊಂದಾಗಿ ಸಿಂಹರಾಜನ ಬಳಿಗಂ ಬಂದು, ಮಹಾ ಭಯಭಕ್ತಿಯಿಂದ ವಂದನೆಯಂ ಗೈದು, ಆ ಸಿಂಹರಾಜನೊಡನೆ—ಎಲೇ ಸ್ವಾಮಿ, ಮಹಾ ದುಂಮಾನದಲ್ಲು ಇ

ದ್ದೀರಿ, ಇಂಥಾ ದುಂವಮಾನದಲ್ಲು ಇಹ ಕಾರಣವೇನೆಂದು, ಬಿಂನ್ನೈಸಲಾಗಿ; ಸಿಂಹರಾಜಂ—ತನ್ನ ಮನಸಿನ ಚಿಂತೆಯಂ ನಿಮ್ಮ ಕೂಡೆ ಹೇಳ ಬಾರದು, ಅಥವಾ ಹೇಳಿದರೂ ನಿಮ್ಮ ಕೈಯಲಹ ಕಾರ್ಯವಾವುದೆನೆ; ಆ ಕರಟಕ ದಮನಕಂಗಳಿಂತೆಂದವು—ಅರಸುಗಳು ತಮ್ಮ ಮನಸಿನಲ್ಲಿದ್ದ ಅಂತಸ್ಥವನ್ನು ಮಿತ್ರರೊಡನೆ ಹೇಳ ಬೇಕು, ಸುಮ್ಮನೆ ಇಹುದುಚಿತವಲ್ಲಾ; ಅದು ಅಲ್ಲದೆ ನೀನು ಏನೂ ಹೇಳಿದಂಥಾ ಕಾರ್ಯವನ್ನು ಆಗ ಮಾಡಿ ಕೊಟ್ಟೇವು ಎಂದು, ಮಹಾ ಸತ್ತ್ವದ ಮಾತನಾಡಲು; ಈ ಸಿಂಹ ರಾಜನು ಆ ಮಾತಿಗೆ ಚಿಂತಾಕ್ರಾಂತನಾಗಿರಲು; ಮತ್ತೀ ಜಂಬುಕಂಗಳು—ಎಲೇ ಸ್ವಾಮಿ, ಇದಕ್ಕೆ ನೀನು ವ್ಯಾಕುಲಂಗೊಳ್ಳ ಬೇಡಾ, ಈಗ ನಿನ್ನ ಅಂತಸ್ಥವಂ ಹೇಳು ಎನಲು; ನೀವು ನನಗೆ ಬಂದು ಶಪಥವಂ ಮಾಡಿ ಕೊಡಿ! ಎನಲಾ ಜಂಬುಕಂಗಳು ಅನೇಕ ಪರಿಯ ಶಪಥವಂ ಮಾಡಿ, ಸಿಂಹರಾಜನ ಮನಸಿಗೆ ಮಹಾ ಸಂತೋಷವಂ ಮಾಡಿ ಕೊಡಲಾ ಸಿಂಹರಾಜಂ ತನ್ನ ನಿಜ ವೃತ್ತಾಂತವಂ ಪೇಳಲಾ ಜಂಬುಕಂಗಳು—ಎಲೇ ಸ್ವಾಮಿ, ನೀನಾ ಮೃಗವಂ ಕಂಡುದಿಲ್ಲಾ; ಅದರ ಸಾಹಸವಂ ಕಾಣದೆ, ಬಯಲ ಧ್ವನಿ ಮಾತ್ರವಂ ಕೇಳಿ, ಇಂತು ಬೆಸಸ ಬಹುದೇ? ಬಯಲ ಧ್ವನಿಗಿಂತು ಭೀತಿಂಬಡ ಬಾರದೆನಲಾ ದಮನಕಂ ಬಂದು ಕಥೆಯಂ ಹೇಳಿದನದೆಂತೆನೆ—

## ೧ನೇ ಕಥೆ.

### ಬಯಲ ಧ್ವನಿಗೆ ಹೆದರಿದ ನರಿ.

ಉತ್ತರ ದೇಶದಲ್ಲು ಕರುಣಾವತಿಯೆಂಬ ಪಟ್ಟಣದಲ್ಲು ಉಗ್ರಸೇನನೆಂಬ ರಾಯಂ ತನ್ನ ಸಕಲ ಸೈನ್ಯವಂ ಕೂಡಿ ಕೊಂಡು, ಬಂದು, ಭ

ದ್ರಸೇನನೆಂಬ ರಾಯನೊಡನೆ ಯುದ್ಧಂ ಗೈಯಲಾ ಉಗ್ರಸೇನನೆಂಬ ರಾಯಂ ತರಹರಿಸಲಾರದೆ, ಕಂಗೆಟ್ಟು, ಬಾಯಂ ಬಿಟ್ಟು, ತನ್ನ ಸಕಲ ಸನ್ನಾಹವಮಂ ಬಿಟ್ಟು, ಮುರಿದು ಹೋಗಲಾ ಭದ್ರಸೇನಂ ಮಹಾ ಸಂ ಸಂತೋಷದಿಂ ತನ್ನ ಪುರಕ್ಕಂ ಬರಲು; ಬುದ್ಧಿನಾಶನನೆಂಬುದೊಂದು ಜಂ ಬುಕಂ, ನಮಗೊಂದು ಮಾಸ ಪರಿಯಂತ್ರದಲ್ಲು ಸಂಪೂರ್ಣ ಗ್ರಾಸ ದೊರಕಿತೆಂದು, ರಣರಂಗದಲ್ಲಿದ್ದುದಂ ಭಕ್ಷಿಸಿ, ಕೆಲವು ದಿವಸಂ ಸುಖ ದಿಂದಿರಲು; ಒಂದು ದಿವಸಂ ಒಂದು ಪ್ರಳಯವಾದ ವಾಯು ಬೀಸಲು; ಒಂದು ವಟವೃಕ್ಷದಲ್ಲು ನಾಲ್ಕೆಂಟು ಕೊಂಬೆಗಳುಡಿದು ಬಿದ್ದು, ಕೆಳಗಿ ರ್ದ ಭೇರಿ ತಂಬಟೆ ಮೊದಲಾದ ವಾದ್ಯಂಗಳ ಮೇಲೆ ಬೀಳಲು; ವಾ ದ್ಯಂಗಳು ಮಹಾ ಧ್ವನಿಯಂ ಬಿಡಲಾ ಜಂಬುಕಸಮೂಹಂ ಕೇಳ್ದು, ರಾಯದಳ ಬಂದಿತೆಂದು, ಕೆಲವು ಯೋಜನಾಂತರಂ ಬಂದು, ಒಂದು ಮಹಾ ಪರ್ವತಮಂ ಏರಿ ನೋಡಲು; ಅಲ್ಲಿ ಏನೂ ಇಲ್ಲದಿರಲು; ಮ ತ್ತೆ ಹತ್ತೆಂಟು ದಿವಸ ಭೀತಿಯಿಂದ ಪರ್ವತದಲ್ಲೇ ಇದ್ದು, ಒಂದು ದಿವ ಸಂ ಆ ರಣಭೂಮಿಗಂ ಬಂದು, ನೋಡಲು; ಅಲ್ಲಿ ಇದ್ದ ಭೇರಿ ತಂಬ ಟೆಗಳ ಮೇಲೆ ಹತ್ತೆಂಟು ಮರನ ಕೊಂಬೆಗಳುಡಿದು ಬಿದ್ದು ಇರಲು; ಈ ಜಂಬುಕಂಗಳು ಕಂಡು—ಇದರಿಂದ ಧ್ವನಿಯಾಯಿತು, ನಾವು ವಿ ಚಾರವಿಲ್ಲದೆ ಬಯಲ ಧ್ವನಿಗೆ ಕಂಗೆಟ್ಟು ಓಡಿ ಹೋಗಿ, ಆಹಾರವಮಂ ಕೆಡಿಸಿ ಕೊಂಡೆವೆಂದು, ತಮ್ಮೊಳು ತಾವೇ ವಿನೋದಂ ಗೈದು, ಮುಂದೆ ಆ ರಣಭೂಮಿಯಲ್ಲಿ ಇರ್ದುದಂ ಭಕ್ಷಿಸಿ ಕೊಂಡು ಇರ್ದವು.

ಅದು ಕಾರಣ ಬಯಲ ಧ್ವನಿ ಮಾತ್ರಕ್ಕೆ ಬೆದರಿ ಹೋಗ ಬಾರದೆಂದು, ಈ ಕಥೆಯಂ ಸಿಂಹರಾಜಂಗೆ ಪೇ ಳಲೀ ಧ್ವನಿಯು ಮಹಾ ಪ್ರಳಯಸಿಡಿಲಿನಿಂದ ವೆಗ್ಗಳವೆಂ ದು, ಸಿಂಹರಾಜಂ ಮಹಾ ಭೀತಿಯಿಂ ನುಡಿಯಲು; ಜಂ ಬುಕಂಗಳು—ಎಲೇ ಸ್ವಾಮಿ, ಈ ವನದೊಳಗೊಬ್ಬ ವೃ ಷಭರಾಜ ಇದ್ದಾನೆ, ಆತನ ಧ್ವನಿಯಲ್ಲದೆ ಮತ್ತಾರ ಧ್ವ ನಿಯಲ್ಲವೆಂದು, ಬಿಂನೈಸಲು; ಸಿಂಹರಾಜಂ ಮಹಾ ಚಿಂ

ತಾಕಾಂತ್ರನಾಗಿ, ಈ ವನವಂ ಬಿಟ್ಟು ಮತ್ತೊಂದು ವ ನಕ್ಕೆ ಹೋಗಿ ಬದುಕುವೆನೆನಲು; ಆ ಜಂಬುಕಂಗಳು ಎಲೇ ಸ್ವಾಮಿ, ಆವನಾನೊಬ್ಬನು ತನ್ನ ಸ್ಥಾನದಲ್ಲೇ ಪೂಜ್ಯನಾಗಿರ ಬೇಕೆನಲೀ ಸಿಂಹರಾಜಂ ಇಂತೆಂದಂ—ಆ ವನಾನೊಬ್ಬ ದುರ್ಜನನಿಂದ ಬಂದು ವಕ್ಕಲು ಕೆಡುತ್ತಿ ದ್ದರೆ ಆ ದುರ್ಜನನ್ನೇ ಬಿಡ ಬೇಕು, ಬಂದು ಬಕ್ಕಲಿಂದ ಗ್ರಾಮ ಕೆಡುತ್ತಿರಲು ಆ ಬಕ್ಕಲನ್ನೇ ಬಿಡ ಬೇಕು, ಗ್ರಾಮದಿಂದ ಬಂದು ಗ್ರಾಮ ಕೆಡುತ್ತಿರಲು ಆ ಗ್ರಾಮ ವನ್ನೇ ಬಿಡ ಬೇಕು; ಆವನಾನೊಬ್ಬ ಮನುಷ್ಯನು ತ ನಗೆ ಸಖ್ಯವಿಲ್ಲದ ಸ್ಥಾನವನ್ನೇ ಬಿಡ ಬೇಕು! ಎಂದು, ಹೇಳಿ, ಮತ್ತಿಂತೆಂದಂ—ವಿದ್ಯಾಗಮವಿಲ್ಲದಲ್ಲಿ, ಆತ್ಮಸುಖ ವಿಲ್ಲದಲ್ಲಿ, ದಾನದಾಯವಿಲ್ಲದಲ್ಲಿ ಬಂದು ದಿನವೂ ಇರ ಬಾ ರದೆಂಬ ನೀತಿಯುಂಟಾಗಿ, ಈ ಸ್ಥಳವನ್ನೇ ಬಿಡ ಬೇ ಕು; ಅದಲ್ಲದೆ ಮಹಾ ಬಲವಾನುಗಳ ಸಂಗಡ ವಿರುದ್ಧ ವ ಮಾಡಿದರೆ ಅತ್ಯಂತ ವಿಪತ್ತಿಗೆ ಕಾರಣವೆಂದು, ಸಿಂಹ ರಾಜಂ ಹೇಳಲಾ ಕರಟಕ ದಮನಕಂಗಳಿಂತೆಂದವು— ಎಲೇ ಸ್ವಾಮಿ, ಈ ಸ್ಥಳದಲ್ಲೇ ಇದ್ದು ಆವದಾನೊಂದು ಕಾರ್ಯಕಾರಣಗಳನ್ನು ಉಪಾಯಾಂತರದಲ್ಲಿಯೇ ಕಾ ಣ ಬಹುದು ಎಂದು, ಹೇಳಲು; ಆ ಸಿಂಹರಾಜಂ—ನಮ ಗೆಯೂ ಆ ವೃಷಭೇಂದ್ರಂಗೆಯೂ ಸ್ನೇಹವ ಮಾಡಿ ಕೊಡುವ ಕಾರ್ಯ ಉಂಟೇ? ಎಂದು, ಕೇಳಲಾ ಜಂ ಬುಕಂಗಳು ಮನದಲ್ಲಿ ಮಹಾ ಉತ್ಸಾಹಿಸಿ ಕೊಂಡು— ಸ್ವಾಮಿಾ, ನೀವು ಹೇಳಿದ ಕಾರ್ಯವನ್ನೇ ಮಾಡ ಬೇ ಕಲ್ಲದೆ ನಮಗೆ ಬೇರೆ ಸ್ವತಂತ್ರವಿಲ್ಲಾ; ನಿಮ್ಮ ಸೇವೆಯು

ಮಾಡಲು ನೀವೇ ಸೇವೆಯು ಪಾಲಿಸಿರಿ! ಎನಲು; ಆ ಸಿಂಹರಾಜನು– ಆಪತ್ತಿಗೆ ಆದವನೇ ಬಂಟಾ! ನಿಮಗೆ ಸರ್ವಪ್ರಧಾನಿಕೆಯುಂ ಕೊಡುವೆನೆಂದು, ನಂಬುಗೆಯುಂ ಕೊಡಲು; ಆ ಕರಟಕ ದಮನಕಂಗಳು ಕಳುಹಿಸಿ ಕೊಂಡು, ಸಂಜೀವಕನ ಬಳಿಗಂ ಬಂದು, ನೀನಾರೆಂದು, ಕೇಳಲು; ಆ ಸಂಜೀವಕಂ ತನ್ನ ಪೂರ್ವ ವೃತ್ತಾಂತವಂ ಹೇಳಲು; ಆ ಜಂಬುಕಂಗಳು ಮಹಾ ಪರಿಹಾಸದಿಂದ ನಕ್ಕು, ಈ ಮುದಿ ಯೆತ್ತಿನ ಧ್ವನಿಯುಂ ಕೇಳಿ ನಮ್ಮ ಸಿಂಹರಾಜಂ ಭೀತಿಸಿದನೆಂದು, ನಕ್ಕು, ಮರಳಿ ಸಿಂಹರಾಜನ ಬಳಿಗಂ ಬಂದು, ಭಯಭಕ್ತಿಯಿಂದ ಕೈ ಮುಗಿದು, ಇದಿರೊಳು ನಿಂದಿರಲು; ಸಿಂಹರಾಜಂ, ನೀವು ಹೋದ ಕಾರ್ಯವೇನಾಯಿತು? ಎಂದು, ಕೇಳಲು; ತಾವು ಮಹಾ ಚಿಂತಾಕ್ರಾಂತನಾದ ಕಾರಣ ತಮ್ಮೊಡನೆ ಬಿನ್ನಹಂ ಮಾಡಲಂಜುವೆವು, ನಮಗೆ ಭೀತಿಯಾಗುತ್ತಿದ್ಧೀತೆನಲು; ಸಿಂಹರಾಜಂ–ನನಗೆ ಹಿತವರಾದ ನಿಮಗೆ ಭೀತಿ ಬೇಡಾ, ಯಥಾರ್ಥವನ್ನು ಹೇಳಿ! ಎನಲು; ಆ ಜಂಬುಕಂಗಳಿಂತೆಂದವು–ಆ ವೃಷಭರಾಜನು, ತಾನು ಪರಮೇಶ್ವರನ ನಿರೂಪದ ಮೇಲೆ ಈ ವನದಲ್ಲು ಬಂದು ಪ್ರಾಣಿಗಳನ್ನು ಆಹಾರವ ಮಾಡಿ ಕೊಂಬೆನು, ಅದು ಕಾರಣ ಈ ವನದಲ್ಲಿ ಆರು ಇದ್ದಡೆಯೂ ಭಕ್ಷಿಸುವೆನೆಂದು, ಮಹಾ ಉದ್ದಂಡ ವೃತ್ತಿಯನ್ನೇ ಮಾಡಿ ಕೊಂಡು ಕೋಪಿಸಿದನೆಂದು, ಕಪಟದಿಂ ಬಿಂನೈಸಲಾ ಸಿಂಹರಾಜ –ನಾನು ಮೊದಲಲ್ಲೇ ಹೇಳಿದೆನು, ಆ ಮಹಾ ಮೃಗದ ಧ್ವನಿಯಾಯಿತು, ಅದರ ಭುಜಬಲಪರಾಕ್ರಮಕ್ಕಿನ್ನು ನೆಲೆಯಿಲ್ಲಾ,

ಅದಕ್ಕೆ ಇದಿರಾಗಿ ನಿಲ್ಲುವವರು ಯಾರೂ ಇಲ್ಲವೆಂದು, ಹೇಳಿ, ಚಿಂತಾಕ್ರಾಂತನಾಗಿರಲು; ಮತ್ತಾ ಜಂಬುಕಂಗಳು—ಎಲೇ ಸ್ವಾಮಿಾ, ಇದಕ್ಕೇನೂ ವ್ಯಾಕುಲಂಗೊಳಬೇಡಾ! ಎಲ್ಲಿ ಕೋಪ ಉಂಟು, ಅಲ್ಲಿ ಕರುಣೆ ಉಂಟು; ನಾನಾ ಪ್ರಕಾರದಿಂದ ವೃಷಭರಾಜನನ್ನು ನಿನ್ನೊಡನೆ ಸ್ನೇಹವ ಮಾಡಿ ಕೊಡುವೆವೆಂದು, ಮತ್ತಂ ಕಳುಹಿಸಿಕೊಂಡು, ಆ ವೃಷಭರಾಜನಂ ಕಂಡು—ಎಲೇ ವೃಷಭರಾಜಾ, ನೀನು ಇಲ್ಲಿ ಇರ ಬೇಡಾ! ಇದು ಸಿಂಹರಾಜನ ವನ; ಇಲ್ಲಿ ಇದ್ದಾಗಲೇ ನೀನು ಕೆಡುವಿ; ಅದರಿಂದ ನೀನು ಈ ವನವನ್ನೇ ಬಿಟ್ಟು ಹೋಗು ಎನಲು; ಆ ಸಂಜೀವಕನು, ನಾನುಚಿತ ವೃತ್ತಿಯನರಿದು, ನೀವು ಹೇಳಿದ ಹಾಗೆ ಇಹೆನೆಂದು, ದೈನ್ಯಂಬಟ್ಟು— ಆವನಾನೊಬ್ಬನು ಸಾಖ್ಯವಾದ ಒಳ್ಳೆಯ ಮಾತನಾಡ ಬೇಕಲ್ಲದೆ ನಿಷ್ಠುರದ ಮಾತನಾಡುವನು ಲೋಕಕ್ಕೆ ಹಗೆಯನು; ಅದೆಂತೆನೆ, ಕೋಗಿಲೆಯು ನುಡಿದರೆ ಲೋಕದ ಜನರೆಲ್ಲಾ ಸಂತೋಷಂ ಬಡುವರು, ಗಾರ್ದಭ ಕೂಗಿದರೆಲ್ಲರು ದೂಷಣವ ಮಾಡುವರೆಂಬ ನೀತಿಯುಂಟಾಗಿ, ಈ ಸಂಜೀವಕಂ ಇನಿಯನಾಡಲು; ಈ ಜಂಬುಕಂಗಳು ಮಹಾ ಕರುಣಂ ಬಟ್ಟು—ಎಲೇ ವೃಷಭರಾಜಾ, ನೀನು ನಾವು ಹೇಳಿದ ಹಾಗೆ ಗೂಢಾರ್ಥತ್ವದಿಂದಿದ್ದರೆ ನಿನ್ನನ್ನು ದೊಡ್ಡಿಯನಂ ಮಾಡಿ, ಆ ಸಿಂಹರಾಜನೊಡನೆ ಮಹಾ ಸ್ನೇಹವ ಮಾಡಿ ಕೊಟ್ಟೇವೆಂದು, ಸಂತೈಸಿ, ಮತ್ತಿಂತೆಂದವು—ಅರಸುಗಳ ದ್ವಾರದಲ್ಲಿ, ವಿವಾಹವಂ ಮಾಡುವಲ್ಲಿ, ಕನ್ಯೆಯಂ ಸಂಗ್ರಹಿಸುವಲ್ಲಿ, ಈ ಮೂರು ಕಾರ್ಯದಲ್ಲಿಯೂ

ಮಧ್ಯಸ್ಥ ಪುರುಷರಿಲ್ಲದೆ ಆಗದು; ಅದು ಕಾರಣ ನಾವು ಹೇಳಿದ ಹಾಗೆ ಇದ್ದರೆ ಮಹಾ ಕಾರ್ಯಗಳಾದಾವೆಂದು, ಹೇಳಿ, ಸಂಜೀವಕಂಗೆ ಕರಟಕನೊಂದು ಕಥೆಯಂ ಹೇಳಿದುದದೆಂತೆನೆ—

## ೧೦ನೇ ಕಥೆ.

### ಪಕ್ಷದಿಂದ ಲಾಭಕೃತ್ಸಾದ ಕಾಗೆ.

ಮಹಾಮೇರುವಿನ ತಪ್ಪಲಲ್ಲು ಮೋಹನವಾಸವೆಂಬುದೊಂದು ವನದಲ್ಲು ಜಿಹ್ವಸ್ವಾದು ಎಂಬುದೊಂದು ಚೂತವೃಕ್ಷಂ ಮಹಾ ಫಲಿತವಾಗಿರಲು; ಬಲಧ್ವಜನೆಂಬುದೊಂದು ಸಿಂಹರಾಜನು ಆ ವನಾಂತರದಲ್ಲು ಬರುತ, ಈ ಚೂತವೃಕ್ಷಮಂ ಕಂಡು, ಆ ಹಣ್ಣಂ ಭಕ್ಷಿಸುವೆನೆಂದು, ಆ ವೃಕ್ಷಮಂ ಕಾದು ಕೊಂಡಿದ್ದುದಲ್ಲದೆ ತಾನು ಆ ಹಣ್ಣಂ ಭಕ್ಷಿಸುವದಕ್ಕೆ ಸಾಮರ್ಥ್ಯವಿಲ್ಲ; ಇತ್ತಲೊಂದು ಕ್ಷೀಣ ಸತ್ತ್ವವಾದರೆಯೂ ಪಕ್ಷವುಳ್ಳ ಕಡೆಯಿಂದ ಒಂದು ವಾಯಸಂ ಬಂದು, ಆ ವೃಕ್ಷದಲ್ಲು ಇದ್ದ ಫಲಂಗಳಂ ಭಕ್ಷಿಸಿ, ಹೋಹದು.

ಅದು ಕಾರಣ ಅರಸುಗಳ ಬಳಿಯಲ್ಲು ಪಕ್ಷವುಳ್ಳವನ ಕಾರ್ಯವಹುದೆಂದು, ಸಂಜೀವಕಂಗೆ ಕರಟಕನೀ ಕಥೆಯಂ ಹೇಳಿ, ನಾವಿಬ್ಬರು ನಿನ್ನ ಪಕ್ಷವಾಗಿ, ಸಿಂಹರಾಜನ ಬಳಿಯಲು ಇಹಾಗ, ನಿನ್ನ ಕಾರ್ಯಗಳೆಲ್ಲಾ ಹಸನಾದಾವು ಎಂದು, ಹೇಳಿ, ಆ ಸಂಜೀವಕನಂ ಸಂತವಿಸಿ, ತಾವೀರ್ವರು ಸಿಂಹರಾಜನ ಬಳಿಗಂ ಬಂದು—ವೃಷಭರಾಜನು ಮಹಾ ಮೂರ್ಖನು; ಆತನನ್ನು ನಾನಾ ಬಗೆಯಿಂದೊಡಂಬಡಿಸಿ, ಮನಸಿನ ಕ್ರೋಧವಂ ಬಿಡಿಸಿ—ನೀನು ಭುಜಬಲಪರಾಕ್ರಮುವನುಳ್ಳಾತನು, ಅದರಿಂದ ವಿನಯಪರನಾಗಿ ಸೌಜನ್ಯನಿಧಿಯಾಗಿ ಇರ ಬೇಕು; ನೀನು ನಮ್ಮ ಸಿಂಹರಾಜನ ಸ್ನೇಹಿತನಾಗಿ, ಮಹಾ ಸೌಖ್ಯದಿಂದಿರ ಬೇ

ಕೆಂದು, ನಾನಾ ತೆರದಿಂದೊಡಂಬಡಿಸಿ, ಬಂದೆವೆಂದು, ಹೇಳಲಾಗಿ; ಸಿಂಹರಾಜಂ ಮಹಾ ಸಂತೋಷಂ ಬಟ್ಟು, ನಿಮ್ಮಿಂದ ನಮ್ಮ ಸ್ನೇಹಿತರಾರುಂಟು? ಎಂದು, ಕೊಂಡಾಡಿ, ತನ್ನ ರಾಜ್ಯದ ಸರ್ವ ಪಾರುಪತ್ಯ ನಿಮ್ಮದು! ಎಂದು, ವಿನಯಪರನಾಗಿ ನುಡಿಯಲು; ಮರು ದಿವಸಂ ಸಿಂಹರಾಜನಂ ಕರದೊಯಿದು, ಸಂಜೀವಕನಂ ಕರತಂದು, ಈರ್ವರಿಗೆ ಸಂಧಾನವಂ ಮಾಡಿ ಕೊಟ್ಟು, ಸುಖದಿಂದಿರಲು; ಸಿಂಹರಾಜಂ – ನಾನು ಮಹಾ ಭುಜಬಲಪರಾಕ್ರಮವನುಳ್ಳವನು, ಮೇಲೆ ನನಗೆ ವೃಷಭರಾಜನು ಸಖನಾದನು, ನನಗಿನ್ನಾರೂ ಇದಿರಿಲ್ಲಾ, ನಾನೇ ಮಹಾ ಶಕ್ತಿವಂತನೆಂದು, ರಾಜ್ಯದ ಸರ್ವ ಪಾರುಪತ್ಯವಂ ಬಿಟ್ಟು, ಸಕಲ ಪ್ರಧಾನರಂ, ಸಕಲ ಪ್ರಜೆ ಪರಿವಾರವಂ ವಿಚಾರಿಸದೆ, ಈ ಸಂಜೀವಕನೊಡನೆ ಮಹಾ ಪ್ರೇಮದಿಂದಿರ್ದಂ.

4. ಆ ಎರಡು ಜಂಬುಕಗಳ ಎರಡನೇ ಸಂಭಾಷಣೆ.

ಆ ಸಮಯದಲ್ಲು ಕರಟಕ ದಮನಕಂಗಳು ತಮ್ಮೊಳಾಲೋಚಿಸಿ ಕೊಂಡು – ಸಿಂಹರಾಜಂ ತಮ್ಮ ಗೊಡವೆಯಂ ಬಿಟ್ಟು ಇದ್ಧಾನೆ, ರಾಜ್ಯ ದೇಶದ ಹಂಬಲವಂ ಬಿಟ್ಟನು; ಬೇಂಟೆ ಬೆಳ್ಳಾರವಂ ಬಿಟ್ಟನು; ಅದರಿಂದ ನಮಗೆ ಆಹಾರವಿಲ್ಲದ ಮೇಲೆ ನಮ್ಮ ಕಾರ್ಯವೇನೂ ಆದದಿಲ್ಲವೆಂದು, ಮಹಾ ಚಿಂತಾಕ್ರಾಂತರಾಗಿರಲು, ಆ ಕರಟಕನಿನ್ನೇನು ಮಾಡುವಣ? ಇದು ನಿನ್ನಿಂದ ಬಂದ ತಪ್ಪೆಂದು, ಜರಿಯಲಾ ದಮನಕನು – ಅಹುದು; ಈ ಸಂಜೀವಕನಿಂದ ನಮ್ಮ ಕಾರ್ಯವೆಲ್ಲಾ ಕೆಟ್ಟಿತು; ಈ ಕೇಡಂ ನಮ್ಮಿಂದ ನಾವೇ ಮಾಡಿ ಕೊಂಡೆವು; ಪೂರ್ವದಲ್ಲೂ ಈ

ರ್ಗರು ತಮ್ಮಿಂದ ತಾವೇ ಕೆಟ್ಟರೆನಲು; ಕರಟಕನವರಾ ರೆಂದು ಬೆಸಗೊಳ್ಳಲಾ ದವುನಕನಿಂತೆಂದಂ—

## ೧೧ನೇ ಕಥೆ.

### ಸ್ವಕರ್ಮವಶವಾದ ಯತೀಶ್ವರನೂ ಟಗರೂ.

ಕಾವೇರಿತೀರದಲ್ಲು ಧರ್ಮಪುರವೆಂಬ ಅಗ್ರಹಾರದಲ್ಲು ದೇವಶರ್ಮ ನೆಂಬ ಯತೀಶ್ವರನು ಮಹಾ ಲುಬ್ಧತ್ವದಿಂ ಬಹಳ ದ್ರವ್ಯಮಂ ಘಳಿಸಿ, ಮತ್ತೊಬ್ಬರಂ ನಂಬದೆ, ಆ ವಸ್ತುವಂ ಒಂದು ಕಂಥೆಯಲ್ಲು ಹೊಲಿದು, ಅದಂ ಮತ್ತಾರ ಕೈಯಲೂ ಕೊಡದೆ, ಆ ಕಂಥೆಯನ್ನು ಧರಿಸಿ ಕೊಂಡು, ಊಟವಂ ಮಾಡುವಾಗಲೂ ಅದಂ ಬಿಡದೆ, ಮಹಾ ಎಚ್ಚರಿಕೆ ಯಲ್ಲು ಜತನ ಮಾಡಿ ಕೊಂಡು ಇರಲಾಗಿ; ಅದಂ ಆಷಾಢಭೂತಿ ಎಂಬ ಬ್ರಾಹ್ಮಣಂ ಕೇಳಿ, ಆ ಯತೀಶ್ವರನ ಕೈಯಲ್ಲು ಇದ್ದ ದ್ರವ್ಯಮಂ ತೆಗದು ಕೊಳ ಬೇಕೆಂದು, ಮಹಾ ಕಪಟವೇಷದಿಂ ಬಂದು, ಯತೀಶ್ವ ರನಂ ಕಂಡು, ಭಯಭಕ್ತಿಯಿಂದ ವಂದನೆಯಂ ಗೈದು, ಅವನ ಶುಶ್ರೂ ಷೆಯಂ ಮಾಡಿ ಕೊಂಡು, ಮಹಾ ನಿಸ್ಪೃಹನಾಗಿ ನುಡಿವುತ್ತಲಿಂತೆಂ ದಂ— ಘಳಿಸಿದಂಥಾ ದ್ರವ್ಯವು ತನ್ನ ಮನೆಯಲ್ಲೇ ಉಳಿವುದು, ನೆಂಟ ರಿಷ್ಟರು ಎಡೆಯಲ್ಲೇ ಉಳಿವರು; ತಾನು ಮಾಡಿದಂಥಾ ಪುಣ್ಯ ಪಾಪ ವೇ ಸಂಗಡ ಬಹವು. ಮತ್ತಿಂತೆಂದನು — ಸಂಪತ್ತುಗಳು ನೀರ ಬೊ ಬ್ಬುಳಿಕೆಯಂತೆ, ಯೌವನವು ಅಸ್ಥಿರವು, ಆಯುಷ್ಯವು ಮಿಂಚಿನ ಹೊ ಳಪಿನಂತೆ, ದ್ರವ್ಯವು ತೋರಿಯಡುಗುವುದು; ಅದು ಕಾರಣ ಆವನಾ ನೊಬ್ಬ ಮನುಷ್ಯನು ಧರ್ಮವನ್ನೇ ಮಾಡ ಬೇಕು. ಇಂತೆಂಬ ಕೆಲವು ತತ್ತ್ವವನ್ನೇ ನುಡಿವುತ್ತ ಇರಲಾಗಿ; ಆ ಒಡೆಯನು, ಏನ ಮಾಡಿದರೂ, ನಂಬದೆ ಇರಲು; ಈ ಪ್ರಕಾರದಿಂ ಕೆಲವು ಕಾಲ ಒಡೆಯನ ಸೇವೆಯಂ ಮಾಡಿ ಕೊಂಡಿರಲು; ಒಂದು ದಿವಸಂ ಪರಗ್ರಾಮದ ಗೃಹಸ್ಥರು ಆ ಯತೀಶ್ವರಗೆ ಭಿಕ್ಷಣಕ್ಕೆ ಹೇಳಲು; ಆಷಾಢಭೂತಿಯಂ ಕೂಡಿ ಕೊಂ ಡು, ಪರಗ್ರಾಮದ ಗೃಹಸ್ಥನ ಮನೆಗಂ ಒಡೆಯನು ಬಂದು, ಆರೋಗ ಣೆಯಂ ಮಾಡಿ, ತಿರುಗಿ ತನ್ನ ಗ್ರಾಮಕ್ಕಂ ಬರುತ್ತಿರಲು; ಎಡದಾರಿ

ಯಲ್ಲಿ ಈ ಆಷಾಢಭೂತಿಯು ತನ್ನ ಚಂಡಿಕೆಯಲ್ಲಿ ಶಿಕ್ಕಿರ್ದ ತೃಣವಂ ತೆಗದು ಕೊಂಡು, ಒಡೆಯನ ಮುಂದಿರಿಸಿ, ಮಹಾ ಚಿಂತಾಕ್ರಾಂತನಾಗಿ, ನಾನು ಮಾಡಿ ಕೊಂಡಂಥಾ ದೋಷಕ್ಕೆ ಅವಧಿ ಯಾವುದು? ಎಂದು, ಕೇಳಲು; ಆ ಯತೀಶ್ವರನು ಬೆರಗಾಗಿ, ಏನೆಂದು, ಕೇಳಲು; ನಾವು ಭೋಜನ ಮಾಡಿದ ಗೃಹಸ್ಥನ ಮನೆಯ ತೃಣವು ತನ್ನ ಚಂಡಿಕೆಯಲ್ಲಿ ಶಿಕ್ಕಿ ಬಂತು, ಇಂಥಾ ಪಾತಕಕ್ಕೊಳಗಾದೆನೆನಲು; ಆ ಯತೀಶ್ವರಂ ವಿಸ್ಮಯಂ ಬಟ್ಟು—ಇದು ಅಜ್ಞಾನದ ಕೃತ, ಅದರಿಂದ ದೋಷವಿಲ್ಲಾ ಎನಲು; ಆಷಾಢಭೂತಿಯು ಬಿನ್ನವಿಸಿ, ಒಡೆಯನ ಕೈಯಿಂ ಕಳುಹಿಸಿ ಕೊಂಡು, ಮಹಾ ವಹಿಲದಿಂ ಪೋಗಿ, ಒಂದು ಗಿಡುವಿನ ಮರೆಯಲ್ಲು ಕುಳಿತಿದ್ದು, ತೃಣವಂ ಬಿಸಾಟು, ತಟಾಕದಲ್ಲು ಸಚೇಲ ಸ್ನಾನವಂ ಮಾಡಿ ಕೊಂಡು, ಒಡೆಯನ ಸಮೀಪಕ್ಕಂ ಬಂದು, ವಂದನೆಯಂ ಗೈದು, ನಿಲಲು; ಯತೀಶ್ವರಂ ಮಹಾ ಚೋದ್ಯಂ ಬಟ್ಟು—ಇಂಥಾ ನಿಸ್ಪೃಹನಿದಿಗೋ! ಈತನು ಮಹಾ ಪುರುಷನು, ಇಂಥಾ ಶಿಷ್ಯನು ದೊರಕಿದುದು ನನ್ನ ಪುಣ್ಯದ ಫಲವೆಂದು, ಮಹಾ ಸಂತೋಷಂ ಬಟ್ಟು, ಈ ಆಷಾಢಭೂತಿಯಂ ನಂಬಿ, ಕೈವಿಡಿದು, ಗುರು ಶಿಷ್ಯರೊಳಗೆ ಭೇದ ಮಾತ್ರವಿಲ್ಲದೆ ಕೆಲವು ಕಾಲ ಸುಖಮಿರ್ದು, ಒಂದು ದಿನಂ ಯತೀಶ್ವರಗೆ ಭಯಭಕ್ತಿಯಿಂ ವಂದನೆಯಂ ಗೈದು—ಎಲೇ ಸ್ವಾಮಿ, ಈ ಶರೀರಂ ಇದ್ದಾಗಲೇ ಮೋಕ್ಷ ಘಳಿಸಿ ಕೊಳ್ಳ ಬೇಕು; ಅದರಿಂದ ಕಾಶಿಯ ಕ್ಷೇತ್ರಕ್ಕೆ ಹೋಗಿ, ಕೈವಲ್ಯವಂ ಘಳಿಸಿ ಕೊಂಡು, ಮುಕ್ತಿಯ ಘಳಿಸ ಬೇಕೆಂದು, ಈ ಯತೀಶ್ವರನಂ ಒಡಂಬಡಿಸಿ, ಕಾಶಿಯಾತ್ರೆಯಂ ಪೋಗಲನು ಗೈದು, ಕೆಲವು ಯೋಜನಾಂತರಕ್ಕಂ ಬಂದು, ಅಸ್ತಮಯಕಾಲವಾಗಲಾಗಿ; ಪದ್ಮಪುರಪಟ್ಟಣದ ಮುಂದೆ ಭದ್ರಾವತಿ ಎಂಬ ನದಿಯು ಮಹಾ ಪ್ರವಾಹವಾಗಿ ಹರಿವುತ್ತಿರಲದಂ ಕಂಡು, ಮಹಾ ಹರುಷದಿಂದೀರ್ವರು ನದಿಯ ತೀರಕ್ಕಂ ಬರಲು; ಈ ಯತೀಶ್ವರಂ ಆ ಕಂಥೆಯಂ ಈ ಆಷಾಢಭೂತಿಯ ಮುಂದಿರಿಸಿ, ತಾನು ಬಹಿರ್ಭೂಮಿಗೆ ಹೋಗಲಾಗಿ; ಅಲ್ಲಿ ಎರಡು ಟಗರುಗಳು ಮಹಾ ಯುದ್ಧವಂ ಮಾಡಲಾಗಿ; ಆ ಎರಡು ಟಗರಿನ ಹಣೆಯಿಂ ಬಿದ್ದ ರಕ್ತ ಪ್ರವಾಹ

ವಾಗಿ ಹರಿವುತ್ತಿರಲಾಗಿ; ಆ ರಕ್ತಮಂ ಒಂದು ಜಂಬುಕಂ ಕಂಡು, ತನ್ನ ಜಿಹ್ವಾಲಂಪಟದಿಂದ ಅದಂ ಸವಿವುತ್ತಿರಲು; ಆ ಟಗರುಗಳೆರಡು ಹಿಂದಕ್ಕೆ ಅಳವಿ ದೆಗದು, ಮಹಾ ಭರದಿಂ ಹಾಯಲಾಗಿ; ಆ ಎರಡು ಟಗರಿನ ಕೊಂಬಿನ ಸಂದಿನಲ್ಲು ಈ ಜಂಬುಕಂ ಶಿಕ್ಕಿ, ಮೃತವಾಗಲಾಗಿ; ಯತೀಶ್ವರಂ ಕಂಡು, ವಿಸ್ಮಯಂ ಬಟ್ಟು, ಮಹಾ ಬೆರಗಾಗಿ, ತಿರುಗಿ ಆ ನದಿಯ ತೀರಕ್ಕಂ ಬಂದು, ನೋಡಲು; ಆಷಾಢಭೂತಿಯು ಆ ದ್ರವ್ಯವನುಳ್ಳ ಕಂಥೆಯಂ ತೆಗದು ಕೊಂಡು ಪಲಾಯನಂ ಗೈದಿರಲು; ಈ ಯತೀಶ್ವರಂ ಮಹಾ ದುಃಖಂ ಗೈದು—ಧನವ ಘಳಿಸುವುದು ಮಹಾ ದುಃಖ, ಘಳಿಸಿದ ಧನವಂ ರಕ್ಷಣೆ ಮಾಡುವುದು ಮಹಾ ದುಃಖ, ಧನ ಹೋದರೆ ಮಹಾ ದುಃಖ, ಧನ ವೆಚ್ಚಿಸುವುದು ಮಹಾ ದುಃಖ; ನಾನಾ ಪ್ರಕಾರದಲ್ಲು ದ್ರವ್ಯವೆಂಬುದು ದುಃಖಕ್ಕೆ ಕಾರಣವೆಂದು, ಹಲುಬಿ ಕೊಂಡು ಹೋದಂ.

ಅದು ಕಾರಣದಿಂದಾ ಸಂಜೀವಕನ ಗುಣವಂ ಚಿಂತಿಸದೆ ಕೆಟ್ಟೆವದೆಂತೆನೆ—

## ೧೨ನೇ ಕಥೆ.

### ಹಂಸಗಳು ಕಾಗೆಯಿಂದ ಕೆಟ್ಟದ್ದು.

ಮಹಾಮೇರುವಿನ ತಪ್ಪಲಲ್ಲಿ ಪಾರಾವತನೆಂಬುದೊಂದು ರಾಜಹಂಸಂ ತನ್ನ ಕುಲಗೋತ್ರಸಹಿತಂ ಅತಿ ಉದ್ದವಾಗಿದ್ದದೊಂದು ಕೋಡುಗಲ್ಲಿನ ಮೇಲೆ ಗೂಡನಿಕ್ಕಿ ಕೊಂಡು ಇರಲು; ಅಲ್ಲಿ ಆವನಾನೊಬ್ಬ ಬೇಡಂ ಬೇಂಟೆಗೆ ಬಂದು, ಅದರ ಮೇಲೆ ಹತ್ತುವದಕ್ಕೆ ಬಗೆಯಂ ಕಾಣದೆ, ಬಾಣ ಪ್ರಯೋಗ ಮಾಡುವದಕ್ಕೆ ಸಹಾ ಆವದೊಂದಕ್ಕೂ ವಶವಲ್ಲದೆ ಇರಲು; ಈ ಪ್ರಕಾರದಿಂದ ಚಿರ ಕಾಲ ಸುಖದಿಂದಿದ್ದವು. ಒಂದು ದಿನಂ ಘಟನಾಶನೆಂಬುದೊಂದು ವಾಯಸಂ ಮಳೆಯಿಂ ತೋದು, ನೆನದು, ಮಹಾ ಭಯದಿಂದ ಹಂಸಗಳಿರ್ದ ಸ್ಥಳಕ್ಕಂ ಬಂದು, ದೈನ್ಯವೃತ್ತಿಯಿಂ, ಇಂದಿನ ರಾತ್ರೆಯಲ್ಲು ನಿಮ್ಮ ಸಮೀಪದಲ್ಲು ಇದ್ದು ಹೋದೇನೆಂದು, ಹೇಳಲಾ ಹಂಸಗಳು ತಮ್ಮೊಳಾಲೋಚಿಸಿ ಕೊಂಡು—ಇ

ದು ಮಹಾ ದುರ್ಜನನು, ಇದನಿರಿಸಿ ಕೊಂಡಾಗಲೇ ಕೇಡು ತಪ್ಪ ದು ಎಂದು, ನಿಶ್ಚೈಸಿ, ಇಲ್ಲಿ ಇರ ಬೇಡವೆಂದು, ಅಟ್ಟಲು; ಕೆಲವು ಹಂಸ ಗಳು ಕರುಣಂ ಬಟ್ಟು—ಮಹಾ ನೆನದು ಬಂದಿತು, ಇಂದಿನ ರಾತ್ರೆಯ ಲ್ಲಿ ಇದ್ದು ಹೋಗಲಿ! ಎಂದು, ಇರಿಸಿ ಕೊಳ್ಳಲು; ಆ ವಾಯಸಂ ಆ ಲದ ಹಣ್ಣಂ ಭಕ್ಷಿಸಿ ಇದ್ದು, ಬೆಳಗಾಗಿ ಎದ್ದು ಹೋಗುತ್ತ, ವಿಷ್ಟಿಸಿ ಹೋಗಲು; ಕೆಲವು ಕಾಲಕ್ಕೆ ಆ ವಾಯಸನ ವಿಷ್ಟಿಯೊಳಗೆ ಆಲದ ಬೀಜಂಗಳು ಅಂಕುರಿಸಿ, ಮಹಾ ದೊಡ್ಡ ವೃಕ್ಷವಾಗಿ, ಆ ಬೆಟ್ಟವಂ ಹ ಬ್ಬಲು; ಒಬ್ಬ ಬೇಂಟೆಗಾರಂ ಬಂದು, ಮರನೇರಿ, ಬಲೆಯಂ ಹಾಕಿ, ಆ ಹಂಸಗಳನ್ನೆಲ್ಲಾ ಹಿಡಿದು ಕೊಂಡೊಯಿದನು.

ಅದು ಕಾರಣ ದುರ್ಜನರುಗಳಿಗೆ ಉಪಕಾರವಂ ಮಾಡ ಬಾರದು; ನೀಚರುಗಳಿಗೆ ಉಪಕಾರವ ಮಾಡಿದ ರೆ ಅಪಕಾರವನ್ನೇ ಚಿಂತಿಸುವರು; ಹಾವಿಗೆ ಹಾಲು ಎರ ದರೆ ವಿಷ ಹೆಚ್ಚುವದಲ್ಲದೆ ತಗ್ಗಲರಿಯದೆನಲು; ಕರಟಕ ನಿಂತೆಂದುದು—ನೀನು ಹೇಳುವಂಥಾದ್ದು ಸಮ; ನಾವೀ ರ್ವರು ಬಗೆಯದ್ದೇ ಬಂತು; ಅದೆಂತೆನೆ—

## ೧೩ನೇ ಕಥೆ.

ತುಂಬಿಗಳು ಸಮಾಧಾನದ ವೇಳ್ಯದಲ್ಲಿ ಕೆಟ್ಟದ್ದು.

ಪುಷ್ಪವನವೆಂಬ ಮಹಾ ವನಾಂತರದಲ್ಲು ಚಂಚರೀಕರೆಂಬ ತುಂಬಿ ಗಳು ಎರಡು ಸ್ತ್ರೀ ಪುರುಷರಾಗಿ ಇದ್ದು, ಪುಷ್ಪದ ಪರಿಮಳವನ್ನೇ ಆ ಸ್ವಾದನೆ ಮಾಡಿ ಕೊಂಡು, ತಿರುಗುತ್ತಿರಲಾಗಿ; ಒಂದು ದಿವಸಂ ವಿಮ ಲಸರಸಿಯೆಂಬ ಮಹಾ ಸರೋವರದಲ್ಲು ವಿಕಸಿತವಾದ ಕಮಲಪುಷ್ಪಂ ಗಳಂ ಕಂಡು, ಒಂದು ಕಮಲದಲ್ಲು ತಾವೀರ್ವರು ಕುಳಿತು, ಪರಿಮಳ ವನ್ನಾಸ್ವಾದವನ್ನು ಗೈವುತ್ತಾ, ಸುಖದಿಂದಿರಲು; ಆ ಸಮಯದಲ್ಲು ರವಿಯಸ್ತಾಚಲವನ್ನೈದಲು; ಆ ಕಮಲಂಗಳು ಮುಗಿಯಲು; ತುಂಬಿ ಗಳೆರಡು ಆ ಕಮಲದೊಳಗೆ ಶಿಕ್ಕಿ, ಮಹಾ ಚಿಂತಾಕ್ರಾಂತರಾಗಿರಲು;

ಆ ಹೆಣ್ಣು ತುಂಬಿಯು—ನೀನೇಕೆ ಧೃತಿ ಗುಂದಿದಿ? ರಾತ್ರೆ ಹರದು ಹೋದೀತು; ಸೂರ್ಯೋದಯವಾಗಲು, ಕಮಲವೆಲ್ಲಾ ವಿಕಸಿತವಾದಾವು; ಆ ಕ್ಷಣದಲ್ಲು ನಾವಿಬ್ಬರು ಹೋಹ! ನೀನು ಕಂಗೆಡ ಬೇಡವೆಂದು, ತನ್ನ ಪುರುಷನಂ ಸಂತೈಸಿ, ಮಹಾ ಹರುಷದಿಂದಿರಲಾಕ್ಷಣಂ ಒಂದು ಮದ ಸೊಕ್ಕಿದ ಭದ್ರಗಜಂ ಬಂದು, ಆ ಸರೋವರಮಂ ಪೊಕ್ಕು, ಆ ಕಮಲಂಗಳ ಕಿತ್ತು, ಭಕ್ಷಿಸಿತು; ಆ ತುಂಬಿಗಳೆರಡು ಪಂಚತ್ವವನೈದವು.

ಅದು ಕಾರಣದಿಂ ನಾವು ಒಂದು ಮಾಡಲಾಗಿ ದೇವರು ಒಂದು ಮಾಡುವರು; ನಮಗಿನ್ನಾವ ಉಪಾಯ? ಎಂದು, ಕೇಳಲಾ ದಮನಕಂ ಇಂತೆಂದುದು—ನನ್ನ ಬುದ್ಧಿಯೇ ಪಾರಗಾಣಿಸುವದು; ನಾನು ಪಿಂಗಲಕಗೂ ಸಂಜೀವಕಗೂ ಮಿತ್ರಭೇದವಂ ಮಾಡಿ ಕೊಟ್ಟು, ಸಂಜೀವಕನಂ ಕೆಡಿಸ್ಯೇನು; ನಾವು ಸಂಜೀವಕನಂ ಸಿಂಹರಾಜನೊಡನೆ ಸ್ನೇಹವ ಮಾಡಲಾಗಿ ನಮಗಿಂಥ ವಿಪತ್ತು ಬಂದುದಿನ್ನು ಈ ವೃಷಭನಂ ಕೊಲಿಸದೆ ಉಳಿಸಿದರೆ ನಮಗೆ ಉಕ್ಕುಲವಿಲ್ಲ; ಬುದ್ಧಿಯುಂಟಾದರೆ ಯಾವದೊಂದೂ ಕಾರ್ಯವಂ ನಡಿಸ ಬಹುದದೆಂತೆನೆ—

## ೧೪ನೇ ಕಥೆ.

### ಬುದ್ಧಿಯಿಂದ ಗೆದ್ದ ನರಿಗಳು.

ತಾರಾಪುರವೆಂಬ ಪಟ್ಟಣದಲ್ಲು ಸುಬಾಹುವೆಂಬ ರಾಯಂ ಸುಖದಿಂ ರಾಜ್ಯವನಾಳುತ್ತಂ ಇರಲು; ಆ ಪಟ್ಟಣದಲೊಬ್ಬ ರುದ್ರಶರ್ಮನೆಂಬ ಬ್ರಾಹ್ಮಣಂ ಗ್ರಂಥಾಧ್ಯಯನಸಂಪಂನನು, ಆಚಾರಯುಕ್ತನು; ಮಹಾ ಮುಗ್ಧನಾಗಿ, ಆರ ಕೂಡೆಯೂ ಮಾತಾಡಲರಿಯನು, ಒಬ್ಬರನ್ನೂ ಅನುಸರಿಸಲರಿಯನು; ಅದು ಕಾರಣದಿಂ ದರಿದ್ರನಾಗಿ ಸಾವೃತ್ತಿಹನು. ಈ ಪ್ರಕಾರದಿಂ ದರಿದ್ರತೆಯು ಬೆನ್ನ ಬಿಡದಿರಲಾಗಿ, ಆತನ ಸತಿ ಸೋ

ಮಪ್ರಭೆಯೆಂಬಾಕೆಯು ಮಹಾ ದುಃಖದಿಂದ, ದಾರಿದ್ರವನ್ನು ಅನುಭವಿಸಲಾರದೆ, ಒಂದು ದಿನಂ ತನ್ನ ಪತಿಯೊಡನೆ—ನೀನು ಆವದೊಂದು ಉದ್ಯೋಗವಂ ಮಾಡ ಬಾರದೇ? ಒಬ್ಬರನ್ನೂ ಅನುಸರಿಸ ಬಾರದೇ? ಹಸಿವಿಯಿಂ ಸಾವುವದು ವಿಹಿತವಲ್ಲವೆಂದು, ಹೇಳಲಾ ಮಾತಂ ಕೇಳ್ದು, ಆ ವಿಪ್ರಂ ನದಿಯ ತೀರಕ್ಕಂ ಬಂದು, ಸ್ನಾನವಂ ಮಾಡಿ, ಮರಳಿ ಬಪ್ಪ ಸಮಯದಲ್ಲು ಒಂದು ಭೇದಕನೆಂಬ ನರಿಯು ಈತನಂ ಕಂಡು, ಬೆದರಿ ಹೋಗುತ್ತಿರಲದಂ ಕಂಡು, ಈ ನರಿಯನ್ನನುಸರಿಸಿಯಾದರೆಯೂ ಬದುಕುವೆನೆಂದು, ಅದರ ಹಿಂದುಗೊಂಡು ಹೋಗಲಾಗಿ; ಅದು ಮಹಾ ಭೀತಿಸಿ, ಓಡಿ ಹೋಗಲಾಗಿ; ಅದರ ಹಿಂದಂ ಬಿಡದೆ, ತಾನು ಹೋಗಲಾ ನರಿಯು ಮಿಗೆ ಬಳಲ್ದು, ತನ್ನ ಗುದ್ದಮಂ ಹೊಗಲಾಗಿ; ಈ ಬ್ರಾಹ್ಮಣಂ ಹೋಗಿ, ಗುದ್ದದ ಬಾಗಲಲ್ಲು ಕುಳಿತಿರಲು; ಜಂಬುಕಂ ಬೆರಗಾಗಿ, ಎಲೇ ಬ್ರಾಹ್ಮಣಾ, ನೀನು ಬಂದ ಕಾರ್ಯವೇನು? ಎನಲಾಗಿ; ತನ್ನ ಪೂರ್ವ ವೃತ್ತಾಂತಮಂ ಹೇಳಿ, ತನ್ನ ದಾರಿದ್ರವಂ ವಿಚ್ಛಿನ್ನ ಮಾಡ ಹೇಳಿ, ಮಹಾ ದೈನ್ಯಂ ಬಡಲು; ಆ ಜಂಬುಕಂ ಕರುಣಂ ಬಟ್ಟು, ಈ ವಿಪ್ರನಂ ಕರದೊಯಿದು, ತಮ್ಮ ಜಂಬುಕರಾಜನಂ ಕಾಣಿಸಿ, ಎಲೇ ಸ್ವಾಮಿ, ಈ ಬ್ರಾಹ್ಮಣನ ದಾರಿದ್ರವ ಹತ ಮಾಡ ಬೇಕೆಂದು, ಬಿಂನೈಸಲಾ ಜಂಬುಕ ರಾಜಂ—ಎಲೇ ಬ್ರಾಹ್ಮಣಾ, ನಿನಗೆ ಈಗಲೇ ಸಮಗ್ರ ದ್ರವ್ಯ ಬೇಕೋ? ದಿನಂ ಪ್ರತಿಯಲ್ಲು ಕೆಲವು ಕೆಲವು ದ್ರವ್ಯಮಂ ಕೊಡುವ ವಸ್ತು ಬೇಕೋ? ಎಂದು, ಕೇಳಲು; ಆ ಬ್ರಾಹ್ಮಣಂ ತನ್ನೊಳಾಲೋಚಿಸಿ ಕೊಂಡು—ಒಮ್ಮೆನೇ ದ್ರವ್ಯ ಕೊಂಡು ಹೋದರೆ, ಆರಾದರೂ ಮುನಿದರೆ ದ್ರವ್ಯ ಹೋದೀತು; ಅದು ಕಾರ್ಯವಲ್ಲಾ; ದಿನಂ ಪ್ರತಿಯಲ್ಲು ಕೊಡುವದೊಂದು ವಸ್ತುವಂ ಕೊಡು ಎಂದು, ಬಿಂನೈಸಲು; ತಂತ್ರ ಹೃದಯನಾದ ಜಂಬುಕರಾಜಂ ಒಂದು ಆವಿನ ಹೋರಿಯಂ ಕೊಂಡು ಬಂದು, ವಿಪ್ರಂಗೆ ಕೊಟ್ಟು—ಇದಂ ಸುರಕ್ಷಣಮಂ ಮಾಡಿ ಕೊಂಡು, ನಿನ್ನ ಮನೆಯಲ್ಲು ಕಟ್ಟಿ ಕೊಂಡು ಇರಲಾಗಿ, ದಿನಂ ಪ್ರತಿಯಲ್ಲು ಸಗಣಿಯೊಳಗೆ ಐವತ್ತು ವರಹಾನ್ನ ಕೊಟ್ಟೇತು; ಅದಕ್ಕೆ ಏನೊಂದೂ ಉಪದ್ರ ಬಂದರೆ, ನಾವು ಪರಿಹರಿಸಿ ಕೊಟ್ಟೇವು ಎಂದು,

ಹೇಳಿ, ಆ ವಿಪ್ರನಂ ಕಳುಹಲಾತಂ ಸಂತೋಷದಿಂದೈತಂದು, ತನ್ನ ಸತಿಯೊಡನೆ ಈ ವೃತ್ತಾಂತವಮಂ ಪೇಳ್ದು, ಆ ಕರವ ಸಲಿಹಿ ಕೊಂಡು, ಮಹಾ ಧನಾಢ್ಯನಾಗಿ, ಸುಖದಿಂದಿರಲು; ಆ ಬ್ರಾಹ್ಮಣನ ದುಷ್ಪುತ್ರನ ದೋಷದಿಂದ ಆ ಹೋರಿಯು ಒಬ್ಬ ವೇಶ್ಯಾಸ್ತ್ರೀಗೆ ಪ್ರಾಪ್ತವಾದುದು. ಬಳಿಕ ಈಕೆಯ ಮನೆಯ ದಾಸಿಯು, ಈ ಹೊಸ ಕರು ಎಲ್ಲಿಯದು? ಎಂದು, ಬಡಿದು ಬಿಟ್ಟಳು. ಆ ಕರುವು ತಪ್ಪಿ ಬಂದು, ಅರಮನೆಯ ಕುದುರೆಯ ಲಾಯವಮಂ ಪೊಗಲು; ಆದನ್ನು ಅಶ್ವಪಾಲಕರು ಕಂಡು, ಕಟ್ಟಿ ಕೊಂಡು ಇರಲು; ಇತ್ತಲೀ ಬ್ರಾಹ್ಮಣನು ತನ್ನ ನಿತ್ಯ ಕರ್ಮಾನುಷ್ಠಾನಮಂ ತಿದ್ದಿ ಕೊಂಡು, ಗೃಹಕ್ಕೆ ಬಂದು, ಆ ಕರುವನ್ನು ಕಾಣದೆ, ಮಹಾ ವ್ಯಾಕುಲದಿಂ ಸಮಸ್ತ ದೇಶಂಗಳಂ ತೊಳಲಿ ಕಾಣದೆ ಅರಸುತ್ತಿರಲು; ಇತ್ತಲೀ ಲಾಯಮಂ ಹೊಕ್ಕ ಕರುವಂ ಅಶ್ವಪಾಲಕರು ಕಟ್ಟಿ, ಸಲಹುತ್ತಿರಲು; ಈ ಕರುವು ಸಗಣಿಯೊಳಗೆ ಹೊನ್ನನಿಕ್ಕುವುದಂ ಕಂಡು, ಅಶ್ವಪಾಲಕರು—ನನಗೆ ಬರ ಬೇಕು, ತನಗೆ ಬರ ಬೇಕು ಎಂದು, ವಾದಂ ಗೈದು, ಅರಸಿನ ಸಮೀಪಕ್ಕಂ ತಂದು, ಆ ಕರುವಂ ಒಪ್ಪಿಸಿ ಕೊಡಲು; ರಾಯಂ ಮಹಾ ಆಶ್ಚರ್ಯಂ ಬಟ್ಟು, ತನ್ನ ವಾರಣವು ಆವಿನ ಹೋರಿಯನೀಯಿತೆಂದು, ಸುದ್ದಿಯಂ ಹುಟ್ಟಿಸಿ, ಆ ಕರುವ ಸಲಹಿ ಕೊಂಡು ಇರಲು; ಈ ವಾರ್ತೆಯಂ ಬ್ರಾಹ್ಮಣಂ ಕೇಳಿ, ಅದೇ ತನ್ನ ಕರು ಆಗ ಬೇಕೆಂದು, ನಿಶ್ಚೈಸಿ, ಅರಸಿನ ಸಮೀಪಕ್ಕಂ ಬಂದು, ಎಲೇ ರಾಯ, ನನ್ನ ಕರುವಂ ಕೊಡು ಎಂದು, ಕೇಳಲು; ರಾಯಂ, ತನ್ನ ವಾರಣವೀಯಿದ ಕರುವಂ ನಿನಗೆ ಕೊಡುವ ಪರಿ ಹ್ಯಾಗೆ? ಎಂದು, ಮಹಾ ಕೋಪದಿಂ ಬ್ರಾಹ್ಮಣನಂ ನೂಕಿಸಲು; ಆತಂ ಮಹಾ ದುಃಖಿತನಾಗಿ, ಜಂಬುಕರಾಜನ ಬಳಿಗಂ ಹೋಗಿ, ಹೇಳಲಾ ಜಂಬುಕರಾಜಂ ಕೇಳಿ, ನಿನ್ನ ಕರು ನಿನಗೆ ಕೊಡಿಸುವೆನೆಂದು, ಈತನಂ ಸಂತೈಸಿ, ನೀನು ಈ ಪುರದೊಳಗಣ ವಾರ್ತೆಯಂ ದಿನಂ ಪ್ರತಿಯಲ್ಲು ನಮಗೆ ಹೇಳುತ್ತ ಬಾ! ಎಂದು, ಕಟ್ಟಳೆಯಂ ಮಾಡಿ, ಆತನಂ ಕಳುಪಲು; ಆ ಜಂಬುಕರಾಜಂ ತನ್ನ ಸೈನ್ಯ ಪ್ರಜೆ ಪರಿವಾರವಂ ಕೂಡಿ ಕೊಂಡು, ರಾಯನ ರಾಜ್ಯದೊಳಗಣ ತೋಟ ಗದ್ದೆಗಳಂ ಛೇದಿಸಿ, ತಿಂದು, ಹಾ

ಳು ಮಾಡಲಾಗಿ; ಪ್ರಜೆ ಪರಿವಾರವೆಲ್ಲಾ ಬಂದು, ಈ ಅವಸ್ಥೆಯಂ ರಾಯಂಗೆ ಹೇಳಿ, ಮೊರೆಯಿಡಲಾ ರಾಯಂ ಮಹಾ ವ್ಯಾಕುಲಂಗೊಂಡು, ಚಿಂತಾಕ್ರಾಂತನಾಗಿ, ಆ ನರಿಗಳಂ ಕೊಲ ಹೇಳಿ, ಸಮಸ್ತ ಬೇಂಟೆಗಾರರಂ ಕಳುಪಲು; ಆ ಬೇಂಟೆಗಾರರಿಗೆ ಶಿಕ್ಕದೆ, ಅವರನ್ನೆಲ್ಲಾ ಕೊಲಲು; ರಾಯಂ ಮಹಾ ವ್ಯಾಕುಲನಾಗಿರಲು; ಈ ವಾರ್ತೆಯಂ ಈ ಬ್ರಾಹ್ಮಣಂ ಜಂಬುಕರಾಜಂಗೆ ಹೇಳಲು; ಎಲೇ ಬ್ರಾಹ್ಮಣಾ, ನೀನು ರಾಯನ ಬಳಿಗಂ ಹೋಗಿ—ಎಲೇ ರಾಯ, ನೀನು ಬರಿದೇ ಪ್ರಯಾಸಂ ಬಟ್ಟು, ರಾಜ್ಯ ದೇಶಮಂ ಕೆಡಿಸಿ ಕೊಳ್ಳ ಬೇಡ; ನಿನಗೆಯೂ ಜಂಬುಕರಾಜಂಗೆಯೂ ಸಂಧಾನಮಂ ಮಾಡಿಸಿ ಕೊಡುವೆನೆಂದು ಹೇಳು! ಹೋಗೆಂದು, ಕಳುಪಲು; ಆ ವಿಪ್ರಂ ರಾಯನೆಡೆಗಂ ಬಂದು, ಈ ವಾರ್ತೆಯಂ ಹೇಳಲಾಗಿ; ಈ ರಾಯಂ ಮಹಾ ಸಂತೋಷಂ ಬಟ್ಟು, ಈ ಬ್ರಾಹ್ಮಣಗೆ ಉಚಿತಮಂ ಕೊಟ್ಟು, ಸಂಧಾನಕ್ಕೆ ಕಳುಪಲಾ ವಿಪ್ರಂ ಈ ಅವಸ್ಥೆಯಂ ಜಂಬುಕರಾಜಂಗೆ ಹೇಳಿ, ನಾನಾ ಬಗೆಯಿಂದೊಡಂಬಡಿಸಿದಂತೆ ಮಾಡಿ, ಮರಳಿ ತಾನಾ ರಾಯನೆಡೆಗೈತಂದು—ಎಲೇ ರಾಯಾ, ನಿನ್ನನ್ನು ಜಂಬುಕರಾಜನೊಡನೆ ಸಂಧಾನವಂ ಮಾಡುವದುಂಟಾದರೆ, ಅವರೆನಗೆ ಹೇಳಿದುದನು ಕೇಳಿಯೇನು ಎಂದು ಶಪಥವಂ ಮಾಡಿದರೆ, ನಿನ್ನೊಡನೆ ಸಂಧಾನಿತನಾದಾನೆಂದು, ಹೇಳಲಾ ರಾಯಂ ಮಹಾ ಶಪಥಮಂ ಮಾಡಿ ಕೊಟ್ಟು, ಮತ್ತಾ ವಿಪ್ರನಂ ಕಳುಪಲು; ಆತಂ ಬಂದು, ಈ ವಾರ್ತೆಯಂ ಜಂಬುಕರಾಜಂಗೆ ಹೇಳಲು; ಈರ್ವರಿಗೆ ಸಂಧಾನವಂ ಮಾಡಿ ಕೊಡಲು; ಈ ರಾಯಂ ಮಹಾ ಪ್ರೇಮದಿಂ ಜಂಬುಕರಾಜನೊಡನಿಂತೆಂದಂ—ತಾನು ಮಿತ್ರಂಗೆ ಕೊಡ ಬೇಕು, ಆತನಲ್ಲಿ ಇದ್ದ ವಸ್ತು ತಾನು ತೆಗದು ಕೊಳ್ಳ ಬೇಕು, ಆತಂಗೆ ತನ್ನ ಅಂತಸ್ಥಮಂ ಹೇಳ ಬೇಕು, ತಾನು ಆತನ ಮನೆಗೆ ಊಟಕ್ಕೆ ಹೋಗ ಬೇಕು, ತನ್ನ ಮನೆಗೆ ಆತನ್ನ ಊಟಕ್ಕೆ ಕರೆಯ ಬೇಕು; ಈ ಆರು ಗುಣಗಳಿಂದ ಮಿತ್ರತ್ವ ಪುಟ್ಟುವದು; ಅದು ಕಾರಣದಿಂ ನೀನು ನಮ್ಮ ಮನೆಗೆ ಊಟಕ್ಕೆ ಬರ ಬೇಕೆನಲು; ಜಂಬುಕರಾಜಂ, ನಾಲ್ಕು ಮೂರು ದಿವಸಕ್ಕೆ ಬಂದೇವು ಎಂದು, ಹೇಳಿ, ಹೋಗಲು; ಆ ರಾಯಂ ಸರ್ವ ಸಂಭ್ರಮದಿಂ

ಊಟಕ್ಕೆ ಅನುಕೂಲ ಮಾಡಿಸಿ, ಬ್ರಾಹ್ಮಣಂ ಕರೆಯ ಕಳುಪಲಾತಂ ಬಂದು, ಈ ವಾರ್ತೆಯಂ ಜಂಬುಕರಾಜಂಗೆ ಹೇಳೆ; ಎಲೇ ಬ್ರಾಹ್ಮಣಾ, ನೀನು ರಾಯನೆಡೆಗೆ ಹೋಗಿ, ಜಂಬುಕರಾಜನು ಮಹಾ ರಾಜಕಾರ್ಯವಾಗಿ ಹೋಗಿದ್ದಾನೆಂದು ಪೇಳೆನಲಾತಂ ರಾಯಂಗೆ ಈ ವಿವರಮಂ ಪೇಳಲಾತಂ ಇಂತೆಂದಂ—ತನ್ನ ಮಿತ್ರಂಗೆ ಬಹಂಥ ಪಾಪವನ್ನು ತೊಲಗಿಸ ಬೇಕು, ಸುಬುದ್ಧಿಯಂ ಪೇಳ ಬೇಕು, ದುರ್ಬುದ್ಧಿಯಂ ಬಿಡಿಸ ಬೇಕು, ಆಪತ್ತಿನ ವೇಳೆಯಲ್ಲು ಬಿಡ ಬಾರದು, ಇಂಥಾತನೀಗಲೇ ಮಿತ್ರನು; ನನ್ನನ್ನು ರಾಜಕಾರ್ಯಕ್ಕೆ ಹೋಗುತ್ತ ಕರದೊಯಿದುದಿಲ್ಲವೆಂದು, ಮಹಾ ವ್ಯಾಕುಲಂಗೊಂಡು, ಆ ರಾಯಂ ಈ ಬ್ರಾಹ್ಮಣನಂ ಕಳುಪಲಾತನೈತಂದು, ಜಂಬುಕರಾಜಂಗೆ ಪೇಳಲಾ ಜಂಬುಕರಾಜಂ—ಮಹಾ ಕಾರ್ಯವ್ಯಾತು; ನಾವು ನಾಳೆ ಊಟಕ್ಕೆ ಬಂದೇವು ಎಂದು, ಹೇಳಿ, ಕಳುಪಲು; ರಾಯಂ ಉತ್ಸಾಹದಿಂ ಸೌರಿಸಲು; ಜಂಬುಕರಾಜಂ ತನ್ನ ಬಂಧು ಬಳಗ ಸಕಲ ಸೈನ್ಯ ಸಹಾ ಬಂದು, ಭೋಜನವಂ ಮಾಡಿ, ರಾಯನೊಡನೆ ಸುಖಸಂಕಥಾವಿನೋದದಿಂ ಕುಳುತಿಪ್ಪಾಗ, ರಾಯಂ, ಇಷ್ಟು ದಿನ ರಾಜಕಾರ್ಯವೇನಾಯಿತೆಂದು, ಬೆಸಗೊಳ್ಳಲು; ಸಮುದ್ರರಾಜನನ್ನು ಬಡವಾಗ್ನಿಯು ಮಹಾ ಕೋಪದಿಂ ದಹಿಸುತ್ತಿರಲಾಗಿ, ನಾವು ಹೋಗಿ, ಬಾಲದಲ್ಲು ಬಡಿದು ನಂದಿಸಿ, ಆ ಸಮುದ್ರರಾಜನ ಉಬ್ಬಸವಂ ತಗ್ಗಿಸಿ, ಬಂದೆವು ಎನಲಾ ರಾಯಂ ವಿಸ್ಮಿತನಾಗಿ, ಸಮುದ್ರಕ್ಕೆ ಕಿಚ್ಚು ಎದ್ದಿದುಂಟೇ? ಎಂದು, ಹಾಸ್ಯ ಮಾಡಿ ಹೇಳಲು; ಎಲೇ ರಾಯಾ, ವಾರಣವು ಆವಿನ ಹೋರಿಯನ್ನೀಯುವದುಂಟೇ? ಎಂದು, ಮಹಾ ಹಾಸ್ಯಮಂ ಮಾಡಿ, ರಾಯಂಗೆ ನಿದರ್ಶನಮಂ ತೋರಿ, ಆ ಬ್ರಾಹ್ಮಣನ ಕರುವಂ ಆತಂಗೆ ಕೊಡಿಸಿ, ಸಂತೋಷದಿಂ ತಮ್ಮ ನೆಲೆಗಂ ಹೋದವು.

ಅದು ಕಾರಣದಿಂ ಬುದ್ಧಿಯಿಂ ಹಗೆಯು ಗೆಲ ಬೇಕೆನಲು; ಕರಟಕನದಹುದು, ಆದೊಡಂ ನೀನಶಕ್ತನೆನಲಾ ದಮನಕಂ ಇಂತೆಂದುದು—ಆವನಾನೊಬ್ಬನು ತನಗೆ ಶಕ್ತಿಯುಂಟಾದರೆ ತನ್ನ ಸತ್ತ್ವದಿಂದ ಹಗೆಗಳಂ ಕೊಲ್ಲ

ಬೇಕು; ತನಗೆ ಶಕ್ತಿಯಿಲ್ಲದಿದ್ದರೆ ಉಪಾಯಂಗೈದು, ಅನ್ಯ ಶಕ್ತಿಯಿಂದಲಾದರೂ ಕೊಲಿಸ ಬೇಕು; ಅದೆಂತೆನೆ—

## ೧೫ನೇ ಕಥೆಯ ಮೊದಲಿನ ಭಾಗ.

ತನಗೆ ಒಂದು ನರಿ ಹೇಳಿದ ಉಪಾಯದಿಂದ ಕಾಗೆ ಗೆದ್ದದ್ದು.

ಪ್ರಮದಸಖ್ಯವೆಂಬ ವನದಲ್ಲಿ ಹೇಮವರ್ಮವೆಂಬುದೊಂದು ವಾಯಸಂ ಮಹಾ ದೊಡ್ಡಿತಾದ ವಟವೃಕ್ಷದಲ್ಲಿ ಗೂಡಂ ಮಾಡಿಕೊಂಡು, ತತ್ತಿಯನಿಕ್ಕಿ ಕೊಂಡು, ಸುಖದಲ್ಲು ಇರುತ್ತ, ಒಂದು ದಿನಂ ತನ್ನ ಆಹಾರ ನಿಮಿತ್ತವಾಗಿ ವನಾಂತರಕ್ಕೆ ಹೋಗಲಾ ಮರನ ಕೆಳಗೊಂದು ಕೃಷ್ಣಸರ್ಪ ಹುತ್ತವನಿಕ್ಕಿ ಕೊಂಡಿರ್ದು, ಈ ವಾಯಸವಿಲ್ಲದಿರ್ದುದಂ ಕಂಡು, ಮರನೇರಿ, ಆ ತತ್ತಿಗಳಂ ತಿಂದು, ತನ್ನ ಹುತ್ತಕ್ಕೆ ಬಹುದು. ಈ ಪ್ರಕಾರದಿಂ ವಾಯಸತತ್ತಿಗಳಂ ಕಾಲಕಾಲಂ ಪ್ರತಿಯಲ್ಲು ಭಕ್ಷಿಸಲಾಗಿ; ಆ ವಾಯಸಂ ಚಿಂತಾಕ್ರಾಂತನಾಗಿ, ನನ್ನ ತತ್ತಿಗಳಂ ತಿನ್ನ ಬೇಡವೆಂದು, ಈ ಸರ್ಪನಂ ಮಹಾ ದೈನ್ಯದಿಂ ಬೇಡಿ ಕೊಳ್ಳಲು; ಆ ಮಾತಂ ಬಗೆಯದೆ, ಆ ವಾಯಸತತ್ತಿಗಳೆಲ್ಲವಂ ಭಕ್ಷಿಸುತ್ತಿರಲು; ಆ ವಾಯಸಂ ಮಹಾ ನೊಂದು ಕೊಂಡು, ತನಗೆ ಮಿತ್ರನಾದಂಥಾ ತಂತ್ರರಾಜನೆಂಬ ಜಂಬುಕನ ಬಳಿಗೈತಂದು, ತನ್ನ ವೃತ್ತಾಂತಮಂ ಹೇಳಿ, ಮಹಾ ದುಃಖಂಗೊಳ್ಳಲು; ಆ ಜಂಬುಕಂ ವಿನಯನುಡಿಗಳಿಂದುಪಚರಿಸಿ, ವಾಯಸನಂ ಸಂತವಿಸಿ, ಇಂತೆಂದುದು—ಪೂರ್ವದಲ್ಲು ಒಂದು ಏಡಿಯು ಉಪಾಯಾಂತ್ರದಿಂದೊಂದು ಮಹಾ ಬಕನಂ ಕೊಂದಿತು, ಆ ಪ್ರಕಾರದಿಂ ನಾವು ಉಪಾಯಾಂತ್ರದಿಂ ಸರ್ಪನಂ ಕೊಲ್ಲಬೇಕೆನಲು; ವಾಯಸಂ, ಏಡಿಯು ಬಕನ ಕೊಂದ ಪರಿ ಹ್ಯಾಗೆ? ಎಂದು, ಕೇಳಲು; ಆ ಜಂಬುಕಂ ಇಂತೆಂದುದು—

## ೧೬ನೇ ಕಥೆ.

ಏಡಿಯು ಬಕವನ್ನು ಕೊಂದದ್ದು.

ವಿಮಲಸರೋವರದಲ್ಲಿ ಅನೇಕವಾದ ಮತ್ಸ್ಯಂಗಳು ತಮ್ಮ ಮಿತ್ರಬಾಂಧವರೊಡನೆ ಸುಖದಿಂದಿರಲು; ಒಂದು ದಿವಸಂ ಮಹಾ ಬಕನು

ಉದಕ ತೃಷೆಯಿಂದ ಆ ಸರೋವರಕ್ಕಂ ಬಂದು, ನೀರಂ ನೀಂಟಿ, ಮತ್ಸ್ಯಸಂದೋಹಮಂ ಕಂಡು, ತನ್ನೊಳಾಲೋಚನೆಯಂ ಗೈದು, ಇದನೆಲ್ಲಮಂ ಭಕ್ಷಿಸ ಬೇಕೆಂದು, ಆ ಮೀನಂ ಹಿಡಿಯಲು; ಅವು ಶಿಕ್ಕದೆ ಇರಲು; ಆ ಬಕಂ ಮಹಾ ವ್ಯಾಕುಲದಿಂ ತನ್ನೊಳಾಲೋಚನೆಯಂ ಗೈದು, ಉಪಾಯಾಂತ್ರದಲ್ಲು ಈ ಮೀನಂ ಭಕ್ಷಿಸ ಬೇಕೆಂದು, ಕಪಟದಿಂದ, ತಾನು ಮಹಾ ಯೋಗಿಯಾದಂತೆ, ಆ ಸರೋವರದ ತೀರದಲ್ಲು ಮಹಾ ಧ್ಯಾನಾರೂಢನಾಗಿರಲು; ಈ ಮತ್ಸ್ಯಂಗಳು ಕಂಡು, ಆಶ್ಚರ್ಯಂ ಬಟ್ಟು, ಈ ಬಕನಂ ತಪಸ್ವಿಯೆಂದು, ನಂಬಿ, ವಿಶ್ವಾಸಂ ಬಟ್ಟು, ಈ ಮೀನುಗಳೆಲ್ಲಾ ಬಂದು, ನೀನು ಈ ತೆರದಲ್ಲು ಇಹ ಕಾರ್ಯಮಂ ನಮಗರುಹ ಬೇಕೆನಲು; ಬಕನಿಂತೆಂದುದು—ಶರೀರವು ಅನಿತ್ಯ; ಇಂದು ಪರಿಯಂತರವು ಜೀವಹಿಂಸೆಗಳನ್ನೇ ಮಾಡಿ, ಮಹಾ ಪಾತಕಿಯಾದೆನು; ಆ ದೋಷಮಂ ಕಳವೆನೆಂದು, ತಪಸ್ಸಂ ಮಾಡುತ್ತಿದ್ಧೇನೆಂದು, ಹೇಳಲು;—ಮೀನುಗಳು ಯಾವಾಗಲೂ ಉದಕದಲ್ಲೇ ಚರಿಸುತ್ತಿಹವು, ಸರ್ಪಗಳು ಯಾವಾಗಲೂ ವಾಯುವನ್ನೇ ಆಹಾರ ಮಾಡಿ ಕೊಂಡಿಹವು, ಮೇಷೆಗಳು ಯಾವಾಗಲೂ ತರಗೆಲೆಯನ್ನೇ ಭಕ್ಷಿಸಿ ಕೊಂಡಿಹವು, ಮೂಷಿಕಗಳು ಸದಾ ಬಿಲದ್ವಾರದಲ್ಲೇ ಇಹವು, ಗರ್ದಭಗಳು ಸದಾ ಬೂದಿಯೊಳಗೆ ಹೊರಳಿ ಇಹವು, ಬಕಗಳು ಸದಾ ಧ್ಯಾನವನ್ನೇ ಮಾಡಿ ಕೊಂಡಿಹವು; ಇವಕೆ ಇದರಿಂದೆಲ್ಲಾ ಫಲವೇನು? ಮನಸ್ಸು ಶುದ್ಧವಿಲ್ಲದವನ ತಪಸ್ಸು ಈ ಪ್ರಕಾರದಲ್ಲು ನಿಷ್ಫಲವೆಂದು, ಅರಿಯದೆ, ಜಲಚರಂಗಳು ಬಕನಂ ನಂಬಿ, ಮಹಾ ಸಮ್ಮೇಳದಿಂದಿರಲು; ಆ ಬಕನು, ಇದಕ್ಕೆ ಉಪಾಯಮಂ ಕಾಣ ಬೇಕೆಂದು, ತನ್ನೊಳಾಲೋಚಿಸಿ ಕೊಂಡು, ಒಂದು ದಿನಂ ನಿರೋಧದಿಂ ದುಃಖಂ ಗೈಯಲಾಗಿ; ಜಲಚರಂಗಳು ಬಂದು, ಇದೇನೆಂದು, ಬೆಸಗೊಳ್ಳಲು; ಆ ಬಕನಿಂತೆಂದುದು—ಮುಂದೆ ಮಹಾ ದುಷ್ಕಾಲ ಬರುತ್ತಿದ್ಧೀತು, ಅದರಿಂದ ಈ ಸರೋವರಜಲಂ ಬತ್ತಿ ಹೋದಾವು; ನೀವು ಇರಲಾಶ್ರಯವಿಲ್ಲದೆ ಕೆಟ್ಟು ಹೋದೀರಿ ಎಂದು, ನಾನು ಮಹಾ ದುಃಖಂಗೊಳುತ್ತಿದ್ಧೇನೆ ಎಂದು, ಹೇಳಿ, ಆ ಜಲಚರಂಗಳು, ಈ ತಪಸ್ವಿಯ ಮಾತು ತಪ್ಪದೆಂದು, ಮಹಾ ಖೇ

ದಂಗೊಂಡು, ಮರಳಿ ಈ ತಪಸ್ವೀ ಬಳಿಗಂ ಬಂದು, ನಾವು ಬದುಕುವದಕ್ಕೆ ಉಪಾಯವೇನೆಂದು, ಕೇಳಲು; ನಾನು ಇದ್ದು ನಿಮಗೆ ವಿಪತ್ತು ತಪ್ಪಿಸ್ಯೇನು; ನಿಮ್ಮನ್ನು ದಿನಂ ಪ್ರತಿಯಲ್ಲು ಕೊಂಡು ಹೋಗಿ, ಒಬ್ಬ ಒಬ್ಬರಾಗಿ ನೀರೆಂದೂ ಬತ್ತದ ಸರಸಿಯಲ್ಲು ಬಿಡುವೆನೆಂದು, ನಂಬುಗೆಯಂ ಕೊಡಲಾ ಜಲಚರಂಗಳೆಲ್ಲಾ ಮಹಾ ಸಂತೋಷಂ ಬಟ್ಟು, ಈ ಬಕನಂ ನಂಬಿ ಕೊಂಡು ಇರಲು; ಆ ಬಕನು ಒಂದೊಂದು ಮೀನಂ ಹೆಗಲ ಮೇಲೇರಿಸಿ ಕೊಂಡು ಹೋಗಿ, ಮಹಾ ಪರ್ವತದ ಮೇಲೆ ಕುಳಿತು, ಅದಂ ಭಕ್ಷಿಸಿ, ಈ ಪ್ರಕಾರ ದಿನಂ ಪ್ರತಿಯಲ್ಲಿ ಆ ಸರೋವರದೊಳಿದ್ದ ಜಲಚರಂಗಳನೆಲ್ಲಾ ಭಕ್ಷಿಸಿ, ಸರಿ ಮಾಡಲಾಗಿ; ಅಲ್ಲಿ ಇರ್ದುದೊಂದು ಏಡಿಯು—ಎಲೇ ತಪಸ್ವಿ, ನನ್ನನ್ನು ಕೊಂಡು ಹೋಗಿ, ಸಮುದ್ರದಲ್ಲು ಬಿಡ ಬಾರದೇ? ಎಂದು, ದೈನ್ಯಂ ಬಡಲು; ಮತ್ಸ್ಯಮಾಂಸವು ನನಗೆ ಸಾಕಾಯಿತು, ಇಂದು ಈ ಏಡಿಯಂ ಭಕ್ಷಿಸ್ಯೇನೆಂದು, ಅದಂ ಹೆಗಲಂ ಏರಿಸಿ ಕೊಂಡು, ಬೆಟ್ಟದ ಸಮೀಪಕ್ಕಂ ಹೋಗಲು; ಆ ಏಡಿಯು ಮಹಾ ವಿಸ್ಮಯಂ ಬಟ್ಟು—ಈ ಪಥದೊಳು ಸರಸಿಯಂ ಕಾಣೆನು, ಉದಕವಿಲ್ಲ, ಈ ಬೆಟ್ಟದ ಮೇಲಕ್ಕೆ ಹೋಹ ಕಾರಣವೇನೆಂದು, ತನ್ನೊಳಾಲೋಚಿಸಿ ಕೊಂಡು, ಇದು ಮಹಾದ್ಭುತವೆಂದು ತಿಳಿದು, ಚಿಂತಿಸುತ್ತಿರಲಾ ಬಕಂ ಬೆಟ್ಟದ ಮೇಲಕ್ಕಂ ಬಂದು, ಏಡಿಯನ್ನು ಇಳಿ! ಎನಲು; ಆ ಏಡಿಯು ಹತವಾದ ಮತ್ಸ್ಯಗಳ ನಾತವಂ ಮೂಸಿ ನೋಡಿ—ಈ ಬಕಂ ಸಮಸ್ತ ಜಲಚರಂಗಳೆಲ್ಲಾ ಭಕ್ಷಿಸಿತು, ನಾನು ಇಳಿದಾಗಲೇ ನನ್ನನ್ನು ಭಕ್ಷಿಸೋದಲ್ಲದೆ ಬಿಡದೆಂದು, ತನ್ನ ಉಗುರಿಂದ ಬಕನ ಕೊರಳಂ ಹತ್ತೊತ್ತಲು; ಬಕಂ ಮಹಾ ಸಂಕಟದಿಂ ಪಂಚತ್ವವನ್ನೈದಲು; ಈ ಏಡಿಯು ಬಹು ಸಂತೋಷದಿಂ ಒಂದು ಸರೋವರನ್ನುಂ ಶೇರಿ, ಸುಖದಿಂದಿರ್ದುದು.

## ೧೫ನೇ ಕಥೆಯ ಎರಡನೇ ಭಾಗ.

ಈ ಪ್ರಕಾರದಿಂ ಉಪಾಯಾಂತ್ರದಿಂ ದುರ್ಜನರಾಗಿದ್ದವರಂ ಕೊಲ್ಲಬೇಕೆಂದು, ಈ ಕಥೆಯಂ ಜಂಬುಕನು ಹೇಳಲಾ ವಾಯಸಂ ಇಂತಪ್ಪ

ಉಪಾಯವಂ ನನಗೆ ಹೇಳೆನಲು; ಜಂಬುಕಂ ವಾಯಸವನ್ನು ಕೂ
ಡಿ ಕೊಂಡು, ಮಹಾ ವನಾಂತರದಲ್ಲಿ ತಿರುಗುತಿಪ್ಪ ಸಮಯದಲ್ಲಿ
ಒಬ್ಬ ರಾಜಪುತ್ರಂ ಆ ವನದೊಳು ಬೇಂಟೆಯನಾಡಿ, ಬಹಳ ಬಳಲ್ದು,
ತನ್ನ ವಸ್ತ್ರಾಭರಣಮಂ ಸಡಲಿಸಿಟ್ಟು, ಜಲಕ್ರೀಡೆಯನಾಡುತಿರ್ಪುದಂ
ಜಂಬುಕರಾಜಂ ಕಂಡು—ಎಲೇ ವಾಯಸರಾಜಾ, ನೀನು ಈ ಕುಮಾ
ರನ ಕಂಠ ಮಾಲೆಯಂ ಕಚ್ಚಿ ಕೊಂಡು ಹೋಗೆನಲು; ಆ ವಾಯಸಂ
ಆ ಪ್ರಕಾರ ಮಾಡಲಾ ರಾಜಪುತ್ರನ ಪರಿಚಾರಕರು ಕಂಡು, ಬೆನ್ನಟ್ಟ
ಲಾಗಿ; ಅದು ಮೆಲ್ಲ ಮೆಲ್ಲನೆ ಮುಂದಕ್ಕೆ ಹಾರಿ ಹೋಗಿ, ಅವರು ಕಾಂ
ಬಂತೆ ಆ ಮಾಲೆಯಂ ಕೃಷ್ಣಸರ್ಪದ ಹುತ್ತದೊಳಗೆ ಹಾಕಲು; ಆ ರಾ
ಜಪುತ್ರನವರು ಬಂದು, ಹುತ್ತವನಗಸಿ, ಕಂಠಮಾಲೆಯಂ ತೆಗದು ಕೊಂ
ಡು, ಅಲ್ಲಿರ್ದ ಸರ್ಪನಂ ಕೊಂದು, ಹೋದರು. ಇತ್ತಲೀ ವಾಯಸಂ
ತನ್ನ ಹಗೆಯಂ ಕೊಂದು, ಸುಖದಿಂದಿರ್ದುದು.

ಅದು ಕಾರಣ ಉಪಾಯಾಂತ್ರದಿಂದಾ ರಾಯಗೂ
ಆ ಸಂಜೀವಕಗೂ ಭೇದಮನಸ್ಸು ಹುಟ್ಟಿಸಿ ಕೊಟ್ಟು,
ಸಂಜೀವಕನಂ ಕೆಡಿಸ ಬೇಕೆಂದು, ದಮನಕಂ ಹೇಳಿ,
ಮತ್ತಿಂತೆಂದುದು—ಆವನಾನೊಬ್ಬನು ಬುದ್ಧಿಯುಳ್ಳವನೀ
ಗಲೇ ಮಹಾ ಸತ್ತ್ವವನುವಳ್ಳನು; ಮಹಾ ಸತ್ತ್ವವನು
ಳ್ಳವನಾದರೆಯೂ ಬುದ್ಧಿಯಿಲ್ಲದಿದ್ದರೆ ಅವನ ಕೈಯಲೇ
ನೂ ಆಗದದೆಂತೆನೆ—

## ೧೭ನೇ ಕಥೆ.

### ಮೊಲವು ಬುದ್ಧಿಯುಪಾಯದಿಂದ ಸಿಂಹವ ಕೊಂದದ್ದು.

ಪುಣ್ಯಗಂಧವೆಂಬ ವನದಲ್ಲಿ ಭಾಸುರಕನೆಂಬುದೊಂದು ಸಿಂಹರಾ
ಜಂ ಇಷ್ಟ ಮಾಂಸದ ನಾನಾ ಮೃಗತತಿಯಂ ಕೊಂದು, ಮಹಾ ಭೀ
ತಿ ಬಡಿಸಿ, ಆ ವನಕಂ ಮುತ್ತಿಗೆಯಂ ಮಾಡಿ ಕೊಂಡು ಇರಲಾಗಿ;
ಒಂದು ಶಶಕಂ ಮಹಾ ವ್ಯಾಕುಲಂ ಗೊಂಡು—ಈ ಸಿಂಹದ ಬಾಧೆ

ಯಿಂದ ಮೃಗತತಿಯು ಅಳಿವುದಿದಕ್ಕೆ ತಕ್ಕದೊಂದು ಉಪಾಯಮಂ ಕಾಣ ಬೇಕೆಂದು, ತನ್ನೊಳಾಲೋಚನೆಯಂ ಮಾಡಿ ಕೊಂಡು, ಸಮಸ್ತ ಮೃಗತತಿಯಂ ಕೂಡಿ—ಇಂಥಾ ಮುತ್ತಿಗೆಯಲ್ಲಿ ಸಾವುದೊಳ್ಳಿತೇ? ಇದಕೊಂದು ಉಪಾಯಮಂ ಕಾಣ ಬೇಕೆಂದು, ಹೇಳಲಾ ಮೃಗತತಿಯೆಲ್ಲಾ ತಮ್ಮೊಳಾಲೋಚನೆಯಂ ಮಾಡಿ—ಈ ಬಲವಂತನಾದ ಸಿಂಹನೊಡನೆ ವಿರುದ್ಧ ಸಲ್ಲದು, ನಾವು ಓಲೈಸಿ ಬದುಕ ಬೇಕೆಂದು, ತಮ್ಮೊಳೊಂದಾಗಿ, ಆ ಶಶಕನಂ ಕರದು—ನೀನು ಮಹಾ ಬುದ್ಧಿವಂತನು; ಅದು ಕಾರಣ ಸಿಂಹರಾಜನ ಬಳಿಗಂ ಹೋಗಿ, ನಾನಾ ಪ್ರಕಾರದಿಂದೊಡಂಬಡಿಸಿ, ನಿನ್ನ ಆಹಾರಕ್ಕೆ ಒಂದೊಂದು ಮೃಗಮಂ ಸರಿತೆಯಲ್ಲು ಕಳುಹಿಸ್ಯೇವು ಎಂದು ಹೇಳಿ, ಹಲವು ಬಗೆಯಿಂದಾತನಂ ಕೊಂಡಾಡಿ, ಸಂಧಾನವಂ ಮಾಡಿ ಕೊಂಡು ಬಾ! ಎಂದು, ಕಳುಪಲು; ಆ ಶಶಕಂ ಸಿಂಹರಾಜನ ಬಳಿಗಂ ಬಂದು—ನೀನು ಮಹಾ ಪರಾಕ್ರಮಿ, ನಿನಗಾವ ಮೃಗಂಗಳೂ ಈಡಲ್ಲ, ನಿನ್ನ ಭುಜ ಬಲಪರಾಕ್ರಮವಂ ನಮ್ಮ ಮೇಲೆ ತೋರಿಸ ಬಹುದೇ? ಎಂದು, ಮತ್ತಿಂತೆಂದುದು—ಆವನಾನೋರ್ವ ಸಿಂಹರಾಜಂ ಅತಿ ಹಸುವಿನಿಂದ ಬಳಲಿದರೆಯೂ, ಮಹಾ ಉದಕತೃಷೆಯಿಂ ಬಾಯಿ ಬತ್ತಿದರೆಯೂ, ಅತಿವೃದ್ಧನಾದರೆಯೂ, ಆ ಕ್ಷಣದಲ್ಲಿ ತನ್ನ ಪ್ರಾಣಂ ಹೋಗುತ್ತಿದ್ದರೆಯೂ, ಕಂಗೆಟ್ಟು ಕಣ್ಣು ಕಾಣದೆ ಇದ್ದರೆಯೂ, ಮತ್ತೇನೂ ಗತಿ ಇಲ್ಲದೆ ಇದ್ದರೆಯೂ, ಮದ ಸೊಕ್ಕಿದಾನೆಯ ರಕ್ತ ಪಾನಮಂ ಮಾಡಿ, ಅದರ ಮಸ್ತಕವಂ ಶೀಳಿ, ಮಿದುಳಂ ತಿನ ಬೇಕಲ್ಲದೆ ನಮ್ಮಂಥವರ ಮೇಲೆ ನಿನ್ನ ಪರಾಕ್ರಮ ತೋರ ಬಹುದೇ? ಎಂದು, ಮಹಾ ದೈನ್ಯದಿಂ ಬಿನ್ನೈಸಲಾಗಿ; ಸಿಂಹರಾಜಂ ಕರುಣದಿಂದ, ನಾವು ಇಂದು ಮೊದಲು ನಿಮ್ಮ ಮೇಲೆ ರಾಜಕಾರ್ಯ ಮಾಡುವುದಿಲ್ಲಾ ಎಂದು, ನಂಬುಗೆಯಂ ಕೊಡಲು; ಆ ಶಶಕಂ—ಎಲೇ ಸಿಂಹರಾಜಾ, ನೀನು ಇಲ್ಲಿಂದ ಎಲ್ಲಿಗೂ ಚರಿಸ ಬೇಡಾ; ನಾವು ನಿನ್ನ ಆಹಾರಕ್ಕೆ ಒಂದೊಂದು ಮೃಗಮಂ ಸರಿತೆಯಲ್ಲಿ ಕಳುಹ್ಯೇವು, ಅದಂ ಭಕ್ಷಿಸಿಕೊಂಡು ಇರು ಎಂದು, ಹೇಳಿ, ಹಲವು ನಂಬುಗೆಯಿಂದಾತನ್ನ ಕೊಂಡಾಡಲು; ಸಿಂಹರಾಜಂ ಮಹಾ ಸಂತೋಷದಿಂದ, ಹಾಗಾಗಲಿ! ಎಂ

ದು, ಹೇಳಲಾಗಿ; ಸಿಂಹರಾಜನಂ ಬೀಳ್ಕೊಂಡು, ಶಶಕಂ ಮೃಗತತಿ ಇದ್ದ ಬಳಿಗಂ ಬಂದು, ಈ ವೃತ್ತಾಂತಮಂ ಹೇಳಲಾ ಮೃಗಗಳು ಸಂತೋಷಂ ಬಟ್ಟು, ನಿಮ್ಮಿಂದ ನಮ್ಮ ಮೃಗಕುಲ ಉಳಿವುದೆಂದು, ಶಶಕನಂ ಕೊಂಡಾಡಿ, ಆ ಪ್ರಕಾರದಿಂದಿರಲೊಂದು ದಿನಂ ಆ ಶಶಕನ ಸರಿತೆ ಬರಲಾ ಶಶಕಂ ಮನಸಿನಲ್ಲಿ ಮಹಾ ನೊಂದು ಕೊಂಡು, ಈ ಸಿಂಹನಂ ಕೊಲುವುದಕ್ಕೆ ಉಪಾಯಮಂ ಕಾಣ ಬೇಕೆಂದು, ತನ್ನೊಳಾಲೋಚಿಸಿ ಕೊಂಡು, ಸಮಸ್ತ ಮೃಗತತಿಯ ಬಳಿಗಂ ಪೋಗಿ, ಸಿಂಹಮಂ ನಾನು ಕೊಲುವೆನೆನಲು; ಆ ಮೃಗತತಿಯೆಲ್ಲಾ ಬೆರಗಾಗಿ—ನೀನು ಅಲ್ಪ ಶರೀರಿ, ಈ ಸಾಹಸಿಯಾದ ಸಿಂಹನಂ ಕೊಲುವದಕ್ಕೆ ಸಾಮರ್ಥ್ಯ ಉಂಟೇ? ಎಂದು, ಕೇಳಲಾ ಶಶಕನಿಂತೆಂದುದು—ತಾನು ಕ್ಷೀಣನಾಗಿ ಸತ್ತ್ವಹೀನನಾದರೆಯೂ ಬುದ್ಧಿಪ್ರಕಾಶ ಉಂಟಾದರೆ, ತನಗಿಂದ ಬಲ್ಲಿದರಂ ಕೊಲ್ಲ ಬಹುದು. ಆ ಶಶಕನ ಧೈರ್ಯಕ್ಕೆ ಆ ಮೃಗತತಿಯೆಲ್ಲಾ ಆಶ್ಚರ್ಯಂ ಬಟ್ಟು, ಶಶಕನಂ ಕಳುಪಲಾ ಸಿಂಹನೆಡೆಗಂ ಬರುತ್ತಂ, ಮಾರ್ಗದಲ್ಲಿ ಒಂದು ದೊಡ್ಡ ಭಾವಿಯಂ ಕಂಡು, ಅದರಲ್ಲಿ ತನ್ನ ನೆಳಲಂ ಕಂಡು, ಇದೇ ಉಪಾಯವೆಂದು, ನಿಶ್ಚೈಸಿ, ಸಿಂಹ ಇದ್ದೆಡೆಗೈತರಲಾ ಸಿಂಹರಾಜಂ ಮಹಾ ಕೋಪಿಸಿ ಕೊಂಡು, ತನ್ನ ಆಹಾರದ ವೇಳ್ಯಕ್ಕೆ ಬರಲಿಲ್ಲಾ! ಎನಲು; ಆ ಶಶಕಂ—ಎಲೇ ಸ್ವಾಮಿ, ನಾನು ಈಗಲೇ ಬಿನ್ನಹ ಮಾಡುವರೆ ಇದು ವೇಳ್ಯವಲ್ಲಾ, ತಾವು ಮಹಾ ಬಳಲಿ ಇದ್ಧೀರಿ; ವಿದ್ಯದಿಂದ ಬಿಟ್ಟು ಶರೀರಕ್ಕೆ ಭೂಷಣವಿಲ್ಲಾ, ಕ್ಷಮೆಯಿಂದ ಬಿಟ್ಟು ಶರೀರಕ್ಕೆ ಅಲಂಕಾರವಿಲ್ಲಾ, ಚಿಂತೆಯಿಂದ ಬಿಟ್ಟು ಶರೀರಕ್ಕೆ ರೋಗವಿಲ್ಲಾ, ಕ್ಷುಧೆಯಿಂದ ಬಿಟ್ಟು ಶರೀರಕ್ಕೆ ಶೋಷಣವಿಲ್ಲಾ; ಇಂತೆಂಬ ನೀತಿಯುಂಟಾಗಿ, ನನ್ನಂ ಭಕ್ಷಿಸಿ, ನಿನ್ನ ಕ್ಷುಧೆಯಂ ಕಳದು, ಮುಂದಣ ಕಾರ್ಯ ವಿಚಾರಿಸಿ ಕೊಳ್ಳಿ! ಎಂದು, ಬಿನ್ನೈಸಲಾಗಿ; ಆ ಸಿಂಹ ಇಂತೆಂದುದು—ಅರಸುಗಳಿಗೆ ಆಜ್ಞಾಭಂಗವಾದಾಗಲೇ ಕೊಂದದು, ವಿದ್ವಾಂಸರಿಗೆ ಅವಮನ್ನಣೆ ಆದಾಗಲೇ ಕೊಂದದು; ಬೇರೆ ಶಯನವ ಮಾಡಿದುದೀಗಲೇ ಸತಿಯರ ಕೊಂದದು; ಇವು ಮೂರು ಆಯುಧವಿಲ್ಲದ ಕೊಲೆ ಎಂದು, ಸಿಂಹರಾಜಂ ಮೊಲನಂ ಕೇಳಲಾಗಿ; ಆ ಶಶ

ಕಂ—ಎಲೇ ಸ್ವಾಮಿ, ಮತ್ತೊಂದು ಬಲವಾನ್ ಆದ ಸಿಂಹ ಬಂದು, ತಮ್ಮ ಮೃಗನಿಕರಕ್ಕೆ ಮಹಾ ನಿಗ್ರಹಮಂ ಮಾಡಿ ಕೊಂಡು ಇದ್ಧಾನೆ; ಅದು ಕಾರಣ ಆಹಾರದ ವೇಳ್ಯಕ್ಕೆ ಬಂದುದಿಲ್ಲಾವೆಂದು, ಬಿನ್ನೈಸಲು; ಆ ಸಿಂಹ ಮಹಾ ಕೋಪಂ ಗೈದು, ಪ್ರತಿಸಿಂಹನಂ ಕೊಂದಲ್ಲದೆ ಉಂಬುದಿಲ್ಲವೆಂದು, ಶಪಥವಂ ಮಾಡಿ ಕೊಂಡು, ಆ ಸಿಂಹನಂ ತೋರಿಸು! ಬಾ! ಎಂದು, ಈ ಮೊಲನಂ ಕೂಡಿ ಕೊಂಡು ಹೋಗಲಾಗಿ; ಶಶಕಂ ಕಂಡ ದೊಡ್ಡ ಭಾವಿಯಂ ತೋರಿ, ಇಲ್ಲಿ ಇದ್ಧಾನೆನಲು; ಆ ಸಿಂಹ ಭಾವಿಯಂ ನೋಡಿ, ತನ್ನ ಪ್ರತಿಬಿಂಬಮಂ ಕಂಡು, ಮದಾಂತಿಕೆಯಿಂದ ತನ್ನ ತಾನರಿಯದೆ, ಪ್ರತಿಸಿಂಹವೆಂದೇ ಬಗದು, ಅದಂ ಕೊಲುವೆನೆಂದು, ಆ ಭಾವಿಯಂ ಧುಮುಕಲು; ಈ ಮೊಲಂ ತನ್ನ ಮೃಗತತಿಯಂ ಕೂಡಿ ಕೊಂಡು ಬಂದು, ಕಲ್ಲು ಮರನಂ ಹಾಕಿ, ಆ ಭಾವಿಯಂ ಹೂಳಿ, ಸಿಂಹನಂ ಕೊಂದವು.

ಅದು ಕಾರಣ ತಾನು ಅಲ್ಪ ಶರೀರಯಾದರೇನು? ಬುದ್ಧಿ ಪ್ರಕಾಶ ಉಂಟಾದರೆ ಮಹಾ ಕಾರ್ಯಂಗಳಂ ಮಾಡಿ, ಹಗೆಯನಂ ಕೆಡಿಸ ಬಹುದು ಎಂದು, ದಮನಕನೆನಲಾ ಕರಟಕಂ, ಇಂತಪ್ಪ ಪಕ್ಷದಲ್ಲಿ ರಾಜನ ಬಳಿಗಂ ಹೋಗುವಣ! ಎನಲು;

5. ಆ ಎರಡು ಜಂಬುಕಗಳು ಮಿತ್ರಭೇದವ ಮಾಡಿ ಕೊಟ್ಟದ್ದು.

ಕರಟಕ ದಮನಕಂಗಳು ತಮ್ಮೊಳಾಲೋಚನೆಯಂ ಗೈದು, ಈ ಸಂಜೀವಕನು ಇಲ್ಲದ ವೇಳೆಯಲ್ಲು ಆ ಸಿಂಹರಾಜನ ಬಳಿಗಂ ಬಂದು, ವಂದನೆಯಂ ಗೈದು, ನಿಲಲಾಗಿ; ಇದೇನಿರ್ರೈ? ಬಹು ಮೊದಲು ನಮ್ಮ ಓಲಗಕ್ಕೆ ಬಂದುದಿಲ್ಲಾ! ಈಗ ಮಹಾ ಗರ್ವಿಸಿದ್ಧೀರೆಂದು, ಅತಿ ಕೋಪವಂ ಮಾಡಲು; ಆ ಕರಟಕ ದಮನಕಂಗಳಿಂತೆಂದವು—ಎಲೇ ಸ್ವಾಮಿ, ನಿನಗೆ ಮುನ್ನಿನಂತೆ ಬಡೆತನವಿಲ್ಲಾ;

ಸಂಜೀವಕನೆಂಬ ದುರ್ಜನನ ನಂಟುತನ ಮಾಡಿದಿ, ಆತ
ನು ಸರ್ವಾಧಿಕಾರಿ, ರಾಜ್ಯದವರೆಲ್ಲಾ ಈತನ ಆಜ್ಞೆಯು
ಲ್ಲದೆ ನಿಂನಂ ಬಗೆಯರು; ನಿನಗೆಲ್ಲಿಯು ಅರಸುತನವಿದ್ದೀ
ತು? ನಾಳೆಯೇ ನಿಂನಂ ಕೊಲ ಬೇಕೆಂದು, ಮಹಾ ಸಾ
ಧನೆಗಳಂ ಮಾಡುತ್ತಿದ್ದಾನೆ; ನಾವು ಮುನ್ನಿನಂತೆ ಬಂದ
ರೆ ಏನು ಮಾಡುವನೋ? ಎಂದು, ಭೀತಿಸಿ, ಬಂದುದಿಲ್ಲ
ವೆನಲು; ಆ ಮಾತಂ ಕೇಳಿ, ಸಿಂಹರಾಜಂ ವಿಸ್ಮಿತನಾಗಿ,
ಸಂದೇಹವಂ ಬಟ್ಟು, ದುಃಖಿಸಲು; ಆ ದಮನಕನಿಂತೆಂ
ದುದು—ಆ ದ್ರೋಹಿಯಾದ ವೃಷಭಂ ಸ್ವಾಮಿಯ ಸಮೀ
ಪದಲ್ಲಿರ ಬಾರದು; ಅದರಿಂದ ನನ್ನ ಶತ್ರುಗಳಂ ಕೊಲಿ
ಸ್ಯೇನೆಂದರದು ತೃಣಭಕ್ಷಕಂ, ಸ್ವಾಮಿಯ ಶತ್ರುಗಳು
ಮಾಂಸಭಕ್ಷಕರು, ಅದು ಸಹಾಯವಂ ಮಾಡಲರಿಯ
ದು; ಆ ದುರ್ಜನನ ಮೇಲೆ ದುಃಖಂಗೊಂಬುದು ಕೆಲಸ
ವಲ್ಲ; ಅವಂ ಬಂದ ಕಾಲದಿಂ ತಾವು ಬೇಂಟೆಯಂ ಬಿಟ್ಟಿ
ರಿ, ಅದು ಕಾರಣಂ ಮಾಂಸಭಕ್ಷಕರುಗಳೆಲ್ಲಾ ಕಷ್ಟಂ
ಬಡುತ್ತಿದ್ದಾರೆ; ಸ್ವಾಮಿಯ ಮೇಲಣ ಪ್ರೇಮಂ ತಪ್ಪಿ
ಹೋಹುದು; ಅದಲ್ಲದೆಯುಂ ನೀಚರೊಡನೆ ಮಿತ್ರತ್ವ
ವಾಗಿರ ಬಾರದು; ಅದೆಂತೆನೆ—

## ೧೮ನೇ ಕಥೆ.

### ಕೂರೆಯು ತಗುಣೆಯಿಂದ ಕೆಟ್ಟದ್ದು.

ಕಾಂಚನಾವತಿಯೆಂಬ ಪಟ್ಟಣದಲ್ಲು ಕನಕವರ್ಮನೆಂಬ ರಾಯಂ ಸು
ಖದಿಂ ರಾಜ್ಯವನಾಳುತ್ತ ಇರಲು; ಆ ರಾಯನು ಮಲಗುವ ಸುಪ್ಪ
ತ್ತಿಕೆಯಲ್ಲು ಮಂದವಿಸರ್ಪಿಣಿಯೆಂಬುದೊಂದು ಕೂರೆ ವಾಸವಂ ಮಾ
ಡಿ ಕೊಂಡು, ಕೆಲವು ಕಾಲ ಸುಖದಿಂದಿರಲು; ಒಂದು ದಿವಸಂ ಅಗ್ನಿ

ಮುಖವೆಂಬುದೊಂದು ತಗುಣೆ ತನ್ನ ಕುಲ ಗೋತ್ರಮಂ ಬಿಟ್ಟು, ತಪ್ಪಿ, ಒಂಟಿಯಾಗಿ ಬಂದು, ಈ ಕೂರೆಯಂ ಕಂಡು, ತಾನು ಇಂದಿನ ರಾತ್ರೆಯಲ್ಲು ನಿನ್ನ ಬಳಿಯಲ್ಲಿ ಇದ್ದು ಹೋದೇನು ಎನಲು; ನೀನು ಮಹಾ ದುರ್ಜನನು, ಮಹಾ ಮೂರ್ಖನು, ನಿನ್ನನ್ನು ಇರಿಸಿ ಕೊಂಡಾಗಲೇ ತನಗೆ ಕೇಡು ತಪ್ಪದು; ಇರ ಬೇಡಾ! ಎನಲು; ಆ ತಗುಣೆಯಿಂತೆಂದುದು—ಅತಿಥಿಯಾಗಿ ಬಂದವರಂ ಅವಜ್ಞೆ ಗೈವುದು ನಿನಗುಚಿತವಲ್ಲಾ, ನೀನು ಮಹಾ ಬಲ್ಲವನು, ಅದು ಕಾರಣ ನಾನು ಇಂದಿನ ರಾತ್ರೆಯಲ್ಲು ನೀನು ಹೇಳಿದ ಹಾಗೆ ಇದ್ದೇನು ಎನಲು; ಆ ಕೂರೆ ಇಂತೆಂದುದು—ನಾನು ಇಲ್ಲಿ ವಾಸವಾಗಿರ ತೊಡಗಿ ಬಹಳ ಕಾಲವಾಯಿತು, ಈಗ ನೀನು ಬಂದಿ; ಬುದ್ಧಿವಂತನಾಗಿ ಎಡ ಬಲಕ್ಕೆ ಹೋಗದೆ, ಇಂದಿನ ರಾತ್ರೆಯಲ್ಲು ಇದ್ದು ಹೋಗು! ಎನಲು; ಹಾಗಾಗಲಿ! ಎಂದು, ಆ ತಗುಣೆಯಿರಲು; ಆ ರಾಯಂ ಭೋಜನಾದಿಗಳಂ ಮಾಡಿ, ಆ ಮಂಚದಲ್ಲು ಬಂದು ಪವಡಿಸಲು; ಈ ತಗುಣೆಯು ಆ ರಾಯನಂ ಕಡಿದು, ತಾನು ತಪ್ಪಿಸಿ ಕೊಂಡು ಹೋಗಲಾಗಿ; ಆ ರಾಯಂ ಬೆದರಿ ಬಿದ್ದು, ದೀಪವಂ ತರಿಸಿ, ಹಾಸಿಕೆಯಂ ಬಿಚ್ಚಿ ನೋಡಲು; ಆ ಕೂರೆಯು ಮಂದಗತಿಯಿಂದ ಮೆಲ್ಲನೆ ಹೋಗುತ್ತಿರಲು; ಅದಂ ಕಂಡು, ಮರ್ದಿಸಿದರು.

ಅದು ಕಾರಣ ಗುಣವನರಿಯದವರನೊಳಗಿರಿಸಿ ಕೊಂಡರೆ, ಸ್ನೇಹವ ಮಾಡಿದರೆ, ಈ ಮರಿಯಾದೆಯಲ್ಲಿ ಕೆಡುವರು; ನೀನು ಸಂಜೀವಕನಂ ಕೊಲಿಸದೆ ಉಳಿಸಿದರೆ ನಿನ್ನನ್ನು ಕೊಂದಾನು. ಸಿಂಹರಾಜಂ ಕೇಳಿ, ಆ ವೃಷಭನ ವರ್ಮದ ಕುರುಹೇನೆನಲು; ಅದಕ್ಕೆ ಮಹಾ ಕೂರಿತವಾದ ಕೊಂಬುಗಳು; ಅದು ಸ್ವಾಮಿಯಿದ್ದೆಡೆಗೆ ಬಂದು, ಕೊಂಬಂ ತಗ್ಗಿಸಿ ಕೊಂಡು, ಮಹಾ ಭರದಿಂ ಇರಿದು ಕೊಲುವದೆಂದು, ದಮನಕಂ ಹೇಳಿ, ಬೀಳ್ಕೊಂಡು, ಸಂಜೀವಕನ ಬಳಿಗಂ ಹೋಗಿ, ದುಃಖಿತನಾಗಿ ನಿಲಲು;

ಸಂಜೀವಕಂ, ಯಾಕೆ ದುಃಖಿಸುತ್ತಿದ್ಧೀ? ಎನಲು; ಗುಟ್ಟ ನ್ನು ಬಡೆಯು ಬಾರದಾದರೆಯೂ ನಿನ್ನ ಮೇಲಣ ಪ್ರೇ ಮದಿಂ ಮಂತ್ರಭೇದವ ಮಾಡ್ಯೇನದೆಂತೆನೆ—ಪಿಂಗಲಕ ರಾಯಂ ನಿನಗೆ ಮುನಿದು, ನಾಳೆ ಆ ದುರ್ಜನನಂ ಕೊ ಲುವೆನೆಂದು, ಆಣೆಯಿಕ್ಕಿದಂ; ಇಂತೆಂಬ ಕ್ರೂರತ್ವಕ್ಕಾ ಗಿ ದುಃಖಂ ಬಡುತ್ತಿದ್ಧೇನೆನಲು; ಸಂಜೀವಕಂ ಭೀತಿ ಗೊಂಡು, ಮನೋತಾಪಂ ಬಟ್ಟು, ಅದು ಚಾಡಿಗಾರರ ಹಗೆಯಿಂದಾದುದೆನಲಾಗಿ; ಇಂತಿಪ್ಪ ಪಕ್ಷದಲ್ಲಿ ನಿನ್ನ ವಾ ಕ್ಚಾತುರ್ಯದಿಂದರಸನ ಪ್ರಸಾದಂ ನಿನಗೆ ಮರಳಿ ದೊರ ಕುವದೆಂದು, ದಮನಕಂ ಹೇಳಲು; ಸಂಜೀವಕವಿಂತೆಂ ದುದು—ಲಘುವಾದ ದುರ್ಜನರಲ್ಲಿಯೂ ಉತ್ತಮರೆಂತುಂ ಸುಖಿಸ ವಸವಲ್ಲ; ಅದೆಂತೆನೆ—

## ೧೮ನೇ ಕಥೆ.

ಒಂಟೆಯು ಸಿಂಹರಾಜಪ್ರಧಾನರಿಂದ ಕೆಟ್ಟದ್ದು.

ಒಂದಾನೊಂದು ವನಾಂತರದಲ್ಲು ಮದೋತ್ಕಟನೆಂಬುದೊಂದು ಸಿಂ ಹರಾಯಂ ತನ್ನ ಪ್ರಧಾನರಾದ ಹುಲಿಯು ಕಾಗೆಯು ನರಿಯು ಸಹಿ ತಂ ಜೀವನಂ ಗೈಯುತ್ತಿರಲೊಂದು ದಿನಂ ಆ ನಾಲ್ವರು ಸಂಚರಿಸಿ, ಕ್ರಥನಕನೆಂಬುದೊಂದು ಒಂಟೆಯಂ ಕಾಣಲಾ ಸಿಂಹನು ಆಶ್ಚರ್ಯಂ ಬಟ್ಟು—ಅದು ಕಾಡುಮೃಗವೋ? ಅಲ್ಲವೋ? ವಿಚಾರಿಸಿ ಬನ್ನಿ! ಎನ ಲು; ಕಾಗೆಯು ಅಂದುದು—ಎಲೇ ಸ್ವಾಮಿ, ಅದು ಒಂಟೆಯೆಂಬು ದೊಂದು ಗ್ರಾಮಪಶು, ತಾವು ಅದಂ ತಿನ್ನ ಬಹುದು; ಅದು ಕಾರಣ ದಿಂ ಕೊಲ್ಲುವಣ! ಸಿಂಹ ಕೇಳಿ—ತನ್ನ ಗೃಹಕ್ಕಂ ಬಂದಾರನ್ನೂ ಕೊ ಲ ಬಾರದೆಂಬ ನೀತಿ ಉಂಟಾಗಿ, ಹೋಗಿ, ನಿರ್ಭಯವಂ ಕೊಟ್ಟು, ಅದಂ ತನ್ನಿ; ಅದು ಬಂದ ಕಾರಣಂ ವಿಚಾರಿಸ್ಯೇನೆಂದು, ಆಜ್ಞೆಯಂ ಕೊ

ಡಲಾ ಮೂವರು ಹೋಗಲಾ ಜಂಬುಕಂ ಅದನ್ನು ನಂಬಿಸಿ, ಈ ವನಕ್ಕೆ ಅಧಿಪತಿಯಾದ ಮಹಾ ಸಿಂಹರಾಜನ ಪ್ರಧಾನಿಕೆಯಂ ಕೊಡಿಸುವೆನೆನಲು; ಕ್ರಥನಕಂ—ನನಗೆ ತಕ್ಕ ಓಲಗವಮಂ ಮಾಡಿ ಕೊಡ ಬೇಕಲ್ಲದೆ ಈ ಮಹಾ ಸಿಂಹರಾಜನ ಓಲೈಸ ಬಹುದೇ? ಎನಲು; ಆ ಜಂಬುಕಂ ಇಂತೆಂದುದು—ಒಳ್ಳಿತಾದ ಕುದುರೆಯು, ಒಳ್ಳಿಯ ಆಯುಧವು, ಒಳ್ಳಿಯ ಗ್ರಂಥಗಳು, ಒಳ್ಳಿಯ ವೀಣೆ ಕಿನ್ನರಿಯು, ದಿವ್ಯಾಭರಣವು, ಉತ್ತಮ ಪುರುಷರು, ಇಷ್ಟು ಮಂದಿಯು ದೊಡ್ಡವರನ್ನಾಶ್ರಯಿಸಿದರೆ ತಾವು ದೊಡ್ಡವರಹರು; ಅಧಮರನ್ನಾಶ್ರಯಿಸಿದರೆ ತಾವು ಅಧಮರಹರು; ಇಂತೆಂಬ ನೀತಿಯುಂಟಾಗಿ, ನೀನು ಮಹಾ ಉತ್ತಮ ಪುರುಷನು, ನಿನ್ನಂಥವಗಾ ಓಲಗಕ್ಕೆ ಏನು ಬಂತೆಂದು, ಆ ಕ್ರಥನಕನಂ ಸಿಂಹರಾಜನ ಬಳಿಗಂ ಕರತರಲಾಗಿ; ಈತನು ಅದರ ಪೂರ್ವ ವೃತ್ತಾಂತಮಂ ಕೇಳಿ—ಹೇರಾ ಹೇರಿಸಿ ಕೊಂಬುದಕ್ಕೆ ತಿರಿಗಿ ಗ್ರಾಮಕ್ಕಂ ಪೋಗದಿಲ್ಲಿ ಹುಲ್ಲಂಮೇದು ಸುಖವಾಗಿರೆನಲು; ಆ ಕ್ರಥನಕಂ ಸಂತೋಷಂ ಬಟ್ಟು, ಅವರೊಡನೆ ಕೆಲವು ಕಾಲ ಸುಖದಿಂದಿರಲು; ಒಂದು ದಿವಸಂ ಆ ಸಿಂಹರಾಜಂಗೆ ಮಹಾ ವ್ಯಾಧಿ ಬಂದು, ನಡೆಯಲಾರದೆ, ಮಹಾ ಕ್ಷುಧೆಯಿಂದ ಬಳಲಲು; ಪ್ರಧಾನರು ಸಹ ಬಹಳ ಕ್ಷುಧೆಯಂ ಬಡಲಾ ಸಿಂಹ ತನ್ನ ಪ್ರಧಾನರುಗಳಂ ಕರಸಿ, ನಮಗೂ ನಿಮಗೂ ಆಹಾರಕ್ಕೆ ಬಗೆಯುಂಟೇ? ಎಂದು ಕೇಳಲು; ಆ ನಾಲ್ವರು ಹುಡುಕಿ, ಆವದೊಂದು ಬೇಂಟೆ ಶಿಕ್ಕದಿರಲು; ಆ ಜಂಬುಕನಿದಕ್ಕೊಂದು ಉಪಾಯಮಂ ಕಾಣಬೇಕೆಂದು, ಸಿಂಹರಾಜನ ಸಮೀಪಕ್ಕಂ ಹೋಗಿ—ಎಲೇ ಸ್ವಾಮಿ, ತಮ್ಮ ಕ್ಷುಧೇ ಪರಿಹಾರಕ್ಕೆ ಒಂದೂ ಶಿಕ್ಕಲಿಲ್ಲ, ಈ ಕ್ರಥನಕನ ಭಕ್ಷಿಸಬಾರದೇ? ಎನಲು; ಈ ಸಿಂಹರಾಜಂ, ನಂಬಿದವರ ಕೊಲ ಬಾರದು, ಮಹಾ ದೋಷವೆನಲು; ಆ ಜಂಬುಕಂ ಹೋಗಿ, ತನ್ನೀರ್ವರು ಜತೆಪ್ರಧಾನರಂ ಕೂಡಿ ಕೊಂಡು, ತಿರಿಗಿ ಬಂದು—ನಾವು ಮೂವರು ಸ್ವಾಮಿಗೆ ಪಾಪ ಬಾರದಂತೆ ಆ ಕ್ರಥನಕನ ಬಾಯಿಯಿಂದಲೇ ನನ್ನನ್ನು ಭಕ್ಷಿಸು ಎನ್ನಿಸಿದರೆ ನೀವು ಭಕ್ಷಿಸಿ! ಎನಲು; ಸಿಂಹರಾಜಂ, ಹಾಗಾಗಲಿ! ಎಂದು, ಕೈಕೊಳ್ಳಲಾ ಮರು ದಿವಸಂ ಈ ಕ್ರಥನಕನು ಸಹಾ ಓಲಗಕ್ಕೆ

ಬರಲು; ಆ ಸಿಂಹರಾಜಂ, ನನಗೆ ಆಹಾರಕ್ಕೆ ಬಗೆಯುಂಟೇ? ಎಂದು, ಕೇಳಲು; ಆ ಕಾಗೆಯು ಇಂತೆಂದುದು—ಎಲೇ ಸ್ವಾಮಿ, ನಿನ್ನ ಹಸುವಿನ ವೇಳ್ಯೆಗಲ್ಲದೆ ನಾನಿದ್ದು ಫಲವೇನು? ನನ್ನನ್ನು ಭಕ್ಷಿಸಿ, ಬದುಕು; ನಾ ಸ್ವರ್ಗಂ ಪಡ ಕೊಂಡೇನು. ನರಿಯು ಅದಂ ಕೇಳಿ—ಅಕಟಾ, ನೀ ನಲ್ಪ ಶರೀರಿ; ಸ್ವಾಮಿ ನಿನ್ನನ್ನು ತಿಂದರೆಯೂ ಆತನ ಜೀವವುಳಿಯದು; ಅದಲ್ಲದೆ ನಿನ್ನ ಮಾಂಸಂ ವಿಷವನುಳ್ಳದ್ದು; ಹಿಂದಕ್ಕೆ ಹೋಗೆಂದು, ಹೇಳಿ, ಮಹಾ ಹರುಷದಿಂ, ಎಲೇ ಸ್ವಾಮಿ, ನನ್ನ ಭಕ್ಷಿಸು ಎಂದು, ವಂದನೆ ಗೈದು, ಮುಂದೆ ನಿಲಲು; ಹುಲಿಯು ಅದಂ ಕೇಳಿ—ನೀನು ಸಹಾ ಅಲ್ಪ ಶರೀರಿ, ಅದಲ್ಲದೆ ನಿನಗೂ ಸ್ವಾಮಿಗೂ ಒಂದೇ ಜಾತಿ; ಆತಂ ನಿನ್ನ ಭಕ್ಷಿಸ ಬಾರದೆನಲು; ಆ ಜಂಬುಕಂ ಇಂತೆಂದುದು—ಮಹಾ ರಾಜಹಂಸೆಯನ್ನು ಕಾಗೆ ಜರದರೆ, ಸಿಂಹನ ನರಿ ಜರದರೆ, ಅಶ್ವವನ್ನು ಕತ್ತೆ ಜರದರೆ, ವಿದ್ವಾನುಗಳಿಗೆ ಏನೂ ಅರಿಯದವ ಜರದರೆ, ಅವರುಗಳಿಗೆ ಕುಂದಹುದೇ? ಆ ಮರಿಯಾದೆಯಲ್ಲಿ ನಿನ್ನ ಮಾತಿನಿಂ ನನಗೆ ಕುಂದಹುದೇ? ನೀನೇ ಯೋಗ್ಯತೆಯನುಳ್ಳವನೆಂದು ಗರ್ವದಿಂದಿರ ಬೇಡ! ಎನಲು; ಹುಲಿಯು ಆ ಮಾತಂ ಬಗೆಯದೆ—ಎಲೇ ಸ್ವಾಮಿ, ನನ್ನನ್ನೇ ಭಕ್ಷಿಸು, ನನಗೆ ಸ್ವರ್ಗದಲ್ಲಿ ನಿತ್ಯ ಸುಖವಾಗ ಬೇಕೆಂದು, ಬೇಡಲಾ ಕ್ರಥನಕನು ಕೇಳಿ, ಆ ಮೂವರ ಕಪಟವನರಿಯದೆ—ಅವರು ಒಳ್ಳೇ ಮಾತುಗಳನ್ನಾಡಿ ಕೀರ್ತಿಗೊಂಡರು, ನಾನು ಸಹ ಹಾಗೆಯೇ ನುಡಿದೇನೆಂದು, ತನ್ನೊಳಾಲೋಚಿಸಿ ಕೊಂಡು—ಎಲೇ ವ್ಯಾಘ್ರಾ, ನೀ ಹೇಳುವದು ಸರಿ; ಆದೊಡಂ ನೀನು ಸಹ ಸ್ವಾಮಿೂ ಜಾತಿಯವ, ಹಿಂದಕ್ಕೆ ಹೋಗೆನಲು; ತಾನು ಸಿಂಹಕ್ಕೆ ವಂದನೆಯಂ ಗೈದು—ಎಲೇ ಸ್ವಾಮಿ, ತಾವು ಇವರಂ ಭಕ್ಷಿಸ ಬಾರದು; ಅವರ ಬಿಟ್ಟು ನನ್ನ ಭಕ್ಷಿಸಿದರೆ, ಉಭಯ ಲೋಕಂಗಳಂ ಪಡ ಕೊಂಡೇನೆನಲಾ ಕ್ಷಣವೇ ಹುಲಿಯೂ ನರಿಯೂ ಆ ಕ್ರಥನಕನ ಹೊಟ್ಟೆ ಶೀಳಲಾಗಿ; ಆ ನಾಲ್ವರು ಹರುಷಂ ಬಟ್ಟು, ಅದಂ ಭಕ್ಷಿಸಿದರು.

ಸಂಜೀವಕನಾ ಕಥೆಯಂ ಹೇಳಿ, ದುಃಖಂ ಗೊಂಡು, ಮತ್ತೊಂದು ಕಥೆ ಹೇಳಿದುದದೆಂತೆನೆ—

# ೨೦ನೇ ಕಥೆ.

## ಬಡಗಿಯನು ಸಿಂಹರಾಜಪ್ರಧಾನರಿಂದ ಕಷ್ಟ ಪಟ್ಟಿದ್ದು.

ಒಂದಾನೊಂದು ಪಟ್ಟಣದಲ್ಲಿ ದೇವಗುಪ್ತನೆಂಬ ಬಡಗಿಯನಿರ್ದು, ದಿನಂ ಪ್ರತಿಯಲ್ಲಿ ತುಪ್ಪದೋದನವಂ ತಕ್ಕೊಂಡು ಹೋಗಿ, ಘೋರಾರಣ್ಯದೊಳು ಮರಗಳಂ ಕಡಿದು, ಶೀಳುತ್ತಿರಲೊಂದು ದಿನಂ ವಿಮಲನೆಂಬ ಸಿಂಹರಾಜಂ ಸಮೀಪಕ್ಕಂ ಬರಲಾಗಿ ಆ ಬಡಗಿಯಂ ಕಂಡು—ಐಯ್ಯೋ, ಸತ್ತೆನು! ಇನ್ನೇನು ಮಾಡಲಿ? ಎಂದು, ತನ್ನೊಳಾಲೋಚಿಸಿ ಕೊಂಡು, ಈಗ ಧೈರ್ಯವೇ ಆಶ್ರಯವೆಂದು, ಸಿಂಹರಾಜಂಗೆದುರ್ಗೊಂಡು ಪೋಗಿ—ಎಲೇ ಸ್ವಾಮಿ, ನನ್ನ ಸತಿಯು ತಂದ ತುಪ್ಪದೋದನವಂ ತಾವು ಈ ಹೊತ್ತು ಉಂಬದೆನಲಾ ಸಿಂಹಂ—ನಾನಟ್ಟ ಪದಾರ್ಥಂಗಳನುಂಬವನಲ್ಲ, ಆದರೆಯೂ ರುಚಿ ನೋಡೋಣ! ಎನಲು; ಬಡಿಗೆಯವನು ಅನ್ನಂ ಬಡಿಸಲು; ಸಿಂಹರಾಜನದನ್ನು ಉಂಡು, ಸಂತೋಷಂ ಬಟ್ಟು, ಇನ್ನಾವದಕ್ಕೂ ಅಂಜ ಬೇಡವೆಂದು, ಅಭಯವ ಕೊಡಲಿತ್ತಲೀ ಬಡಿಗೆಯವಂ ದಿನಾಲು ಬಂದು, ಸಿಂಹರಾಜಂಗೆ ಅನ್ನವನುಣಿಸುವನಾದ್ದರಿಂದಾ ಸಿಂಹ ಬೇಂಟೆಯಂ ಬಿಟ್ಟು, ತನ್ನ ಪ್ರಜೆ ಪರಿವಾರದ ಆಹಾರವುಂ ಬಗೆಯದಿಹನು. ಆ ಸಮಯದೊಳು ಆ ಸಿಂಹನ ಪ್ರಧಾನರಾದ ನಾಲ್ವರು ಜಂಬುಕಂಗಳು, ತಮಗೆ ಆಹಾರಕ್ಕೆ ಬಗೆಯಿಲ್ಲದೆ, ಚಿಂತಾಕ್ರಾಂತರಾಗಿ, ಈ ಬಡಗಿಯನ ಕಡೆಯಿಂದ ತಮ್ಮ ಆಹಾರ ಕೆಟ್ಟು ಹೋಯಿತೆಂದು, ನಾನಾ ಬಗೆಯಿಂದೀತನಂ ಹೊರವಡಿಸ ಬೇಕೆಂದು, ತಮ್ಮೊಳಾಲೋಚಿಸಿ ಕೊಂಡು, ಒಂದು ಉಪಾಯವುಂ ನಿಶ್ಚೈಸಿ ಕೊಂಡು, ಈ ನಾಲ್ವರು ಪ್ರಧಾನರು ಸಿಂಹರಾಜನ ಸಮೀಪಕ್ಕಂ ಬಂದು—ಎಲೇ ಸ್ವಾಮಿ, ನಾವು ಆರಣ್ಯದೊಳಗಿರ್ದ ಮೃಗಗಳು; ಈ ಮನುಷ್ಯರಂ ನಂಬ ಬಹುದೇ? ನಾವು ಎಲ್ಲರಿಗೂ ಕಷ್ಟವಾಗಿದ್ದವರು; ಆ ಬಡಗಿಯನು ತಂದನ್ನಮುಂ ಯಾಕೆ ಭುಂಜಿಸುತ್ತಿದ್ಧೀರಿ? ಎಂದು, ನಾನಾ ಬಗೆಯ ಬೋಧೆಯಂ ತುಂಬಿಸಲು; ಆ ಸಿಂಹನು ವ್ಯಾಕುಲಂಗೊಂಡು, ಮನದಲ್ಲಿ ಸಂದೇಹ ಹುಟ್ಟಿ; ಇಂದು ಆ ಬಡಗಿಯನು ತಂದನ್ನಮುಂ ನಾವು

ನಾಲ್ವರು ಭುಂಜಿಸುವೆವೆಂದು, ಹೇಳಲಾಗಿ; ಈ ನಾಲ್ವರೊಳಗೆ ಒಂದು ನಾಮಯುಕ್ತನೆಂಬ ಜಂಬುಕಂ ಈ ಬಡಗಿಯವನೆಡೆಗಂ ಪೋಗಿ, ನಮ್ಮ ಸಿಂಹರಾಜನು ಕಹಿ ವಸ್ತುವಿನ ಮೇಲೆ ಮಹಾ ಪ್ರೀತಿಯೆಂದು, ಹೇಳಲು; ಆ ಬಡಗಿಯವಂ ಈ ಜಂಬುಕನ ಮಾತು ಕಪಟವೆಂದರಿಯದೆ, ಮಹಾ ಕಹಿ ಮಿಶ್ರವಾದ ಶಾಖಂಗಳಂ ಮಾಡಿಸಿ, ಎಂದಿನಂತೆ ತಂದು, ಸಮರ್ಪಿಸಲು; ಇದಂ ಪರೀಕ್ಷಿಸಿ ನೋಡ ಬೇಕೆಂದು, ನಾಲ್ವರು ಅನ್ನಮಂ ಭುಂಜಿಸಿ, ಕಪಟದಿಂದ ನಾಲ್ವರೂ ಮೂರ್ಛಿಸಿ ಬೀಳಲು; ಆ ಸಿಂಹ ತಾನೊಂದು ಶಾಖಮಂ ಭುಂಜಿಸಿ; ಸವಿದು ನೋಡಿ, ವಿಷವಾಗಿರಲು; ಅತಿ ಭಯ ಪಟ್ಟು, ನನ್ನ ಪ್ರಧಾನರ ಮಾತಂ ಕೇಳದೆ ನಿಷ್ಕಾರಣ ಸತ್ತು ಹೋಗುತ್ತಿದ್ದೇನೆಂದು, ಮಹಾ ಭೀತಿ ಗೈದು, ನನಗೆ ಹಿತರಾದ ನಾಲ್ವರು ಪ್ರಧಾನರು ಮೂರ್ಛಿತರಾದರೆಂದು, ಮಹಾ ಕೋಪದಿಂದ—ಎಲೇ ಬಡಗಿಯವಾ, ನಿನ್ನನ್ನು ಕೊಲ್ಲ ಬಾರದು, ನೀನು ಈ ಸ್ಥಳವಂ ಬಿಟ್ಟು ಹೋಗೆಂದು, ನಿರಾಕರಿಸಿ, ಅಟ್ಟಿ ಬಿಡಲು; ಆತ ಮಹಾ ದುಃಖದಿಂ ಹೋಗಲು; ಇತ್ತಲೀ ಪ್ರಧಾನರುಗಳು ನಾಲ್ಕು ಮೂರು ದಿನಕ್ಕಂ ಮೂರ್ಛೆ ತಿಳಿದು, ಆ ಸಿಂಹರಾಜನೊಡನೆ ಸುಖದಿಂದಿದ್ದವು.

ಅದು ಕಾರಣದಿಂದ ಉತ್ತಮರು ದುರ್ಜನರ ಮಧ್ಯದಲ್ಲಿದ್ದರೆ ಕೆಡುವರು; ಎಲೇ ಮಿತ್ರಾ, ನಾನಿನ್ನೇನು ಮಾಡಲಿ? ಎನಲು; ಪರದೇಶಕ್ಕಂ ಪೋಗೆನಲು; ಸಂಜೀವಕಂ ಸಮ್ಮತಿಸದೆ—ಮುನಿಯುವ ಸಿಂಹರಾಜನ ದೀರ್ಘವಾದ ಹಸ್ತಂಗಳು ಅಲ್ಲಿಯಾದರೆಯೂ ಹಿಂಸಿಸುವವು; ಯುದ್ಧಂಗೈದು ಸ್ವರ್ಗಸ್ಥನಾಗುವದೇ ಹಿತವೆನಲಾಗಿ; ದಮನಕಂ ವೃಷಭನ ಕೂರ್ಗೊಂಬುಗಳಂ ನೋಡಿ, ಅದರಿಂ ಸಿಂಹರಾಜಗೆ ಆವದೊಂದು ವಿಘ್ನ ಬಂದೀತೆಂದು, ತನ್ನೊಳಾಲೋಚಿಸಿ ಕೊಂಡು, ಇಂತೆಂದುದು—ಎಲೇ ಮಿತ್ರಾ, ನೀನಪ್ರಬುದ್ಧನು; ಅನರ್ಥವಾಗಿ ಕೆಟ್ಟರೇನು ಸುಖ? ಅದೆಂತೆನೆ—

## ೨೧ನೇ ಕಥೆ.

### ಆನೆಯು ಅನರ್ಥವಾಗಿ ಕೆಟ್ಟದ್ದು.

ಕಾಮುಖವೆಂಬ ವನಾಂತರದಲ್ಲು ದಿನಾಧಿಕನೆಂಬುದೊಂದು ಟಿಟ್ಟಿಭ ಹಕ್ಕಿಯು ನೆಲಗೂಡಂ ಮಾಡಿ ಕೊಂಡು, ಚಿರ ಕಾಲ ಸುಖದಿಂದಿರಲು; ಒಂದು ಮದಹಸ್ತಿಯು ಬಂದು, ಈ ಟಿಟ್ಟಿಭಹಕ್ಕಿಯು ಇರಿಸಿದ್ದ ತತ್ತಿಯಂ ಮೆಟ್ಟಿ ಒಡೆಯಲಾಗಿ; ಈ ಪ್ರಕಾರದಿಂ ದಿನಂ ಪ್ರತಿಯಲ್ಲು ಒಡಲುರಿವುತ್ತಿರಲು, ಟಿಟ್ಟಿಭಂ, ತನ್ನ ಸಂತಾನ ಉಳಿಯದೆಂದು, ನೊಂದು ಕೊಂಡು, ದುಃಖದಿಂದ ಗಜದ ಸಮ್ಮುಖಕ್ಕಂ ಬಂದು—ಎಲೇ ಗಜರಾಜಾ, ನೀನು ಭುಜಬಲ ಪರಾಕ್ರಮವನುಳ್ಳಾತನು, ನಾನು ಮಹಾ ಕ್ಷೀಣನು, ನಿನಗೆ ಸರಿಯಲ್ಲಾ; ಅದು ಕಾರಣದಿಂ ಮುಂದಾದರೆಯೂ ತನ್ನ ತತ್ತಿಗಳಂ ಮೆಟ್ಟಿ ಒಡೆಯ ಬೇಡವೆಂದು, ಮಹಾ ದೈನ್ಯದಿಂ ಬೇಡಿ ಕೊಳ್ಳಲಾಗಿ; ಗಜರಾಜಂ ತನ್ನ ಮದಾಂಧತೆಯಿಂದ ಟಿಟ್ಟಿಭನ ಮಾತಂ ಬಗೆಯದೆ ಇರಲು; ಮಹಾ ನೊಂದು ಕೊಂಡು, ಈ ಗಜಮಂ ನಾನಾ ಪ್ರಕಾರದಿಂ ಕೊಲ್ಲ ಬೇಕೆಂದು, ನಿಶ್ಚೈಸಿ, ತನ್ನ ಸಂಗಡಿಗನಾದ ಸುಶ್ರುತನೆಂಬ ಜಂಬುಕನ ಬಳಿಗಂ ಬಂದು, ಮಹಾ ನೊಂದು ಕೊಂಡು, ಈ ಸ್ಥಿತಿಯಂ ಹೇಳಲಾ ಜಂಬುಕಂ, ನಾನಾ ಪ್ರಕಾರದಿಂ ಗಜಮಂ ಕೊಲುವೆನೆಂದು, ನೀನಾವುದಕ್ಕಂ ಚಿಂತಿಸ ಬೇಡವೆಂದು, ಸಂತೈಸಿ, ಆ ಟಿಟ್ಟಿಭನಂ ಕೂಡಿ ಕೊಂಡು, ಗುಣವರ್ಮನೆಂಬ ವಾಯಸದ ಬಳಿಗಂ ಬಂದು, ಈ ಸ್ಥಿತಿಯಂ ಹೇಳಿ—ನಾವು ಮದದಾನೆಯಂ ಕೊಲ್ಲ ಬೇಕೆಂದು ಯೋಚಿಸಿದ್ಧೇವೆ, ಅದಕ್ಕೆ ನಿನ್ನ ಸಕಲ ಪರಿವಾರಮಂ ಕೂಡಿ ಕೊಂಡು ನೀನು ಬರ ಬೇಕು ಎಂದು, ಹೇಳಿ, ಆ ವಾಯಸಮಂ ಕೂಡಿ ಕೊಂಡು, ಮಹಾ ಸಂತೋಷದಿಂ ಹಂಸರಾಜನೆಂಬ ನೊಣವಿನ ಬಳಿಗಂ ಬಂದು, ಈ ಸ್ಥಿತಿಯಂ ಹೇಳಿ, ನೀನು ನಿನ್ನ ಸಕಲ ಸೈನ್ಯಮಂ ಕೂಡಿ ಕೊಂಡು ಬರ ಬೇಕೆಂದು, ಹೇಳಿ, ಆ ಮಕ್ಷಿಕನಂ ಕೂಡಿ ಕೊಂಡು, ಹರುಷದಿಂ ಮೇಘನಾದನೆಂಬುದೊಂದು ಕಪ್ಪೆಯ ಬಳಿಗಂ ಬಂದು, ಈ ವಿವರಮಂ ಹೇಳಿ, ಆ ಮಂಡೂಕನಂ ಕೂಡಿ ಕೊಂಡು, ಮನೋತ್ಸಾಹದಿಂದೀ ಜಂಬುಕರಾಜಂ ಆ ಗಜ ಇದ್ದೆಡೆಗಂ ಬರಲು; ಆ

ಗಜರಾಜನು ಮಹಾ ಅರಣ್ಯದೊಳು ತಳಿರ ಸೊಪ್ಪಂ ಮೆದ್ದು, ತಿಳಿ ನೀರಂ ಕುಡಿದು, ಮಹಾ ಸಂತೋಷದಿಂ ಮಳಲೊಟ್ಟೆಲಲ್ಲಿ ಮಲಗಿರ ಲಾಗಿ; ಈ ಜಂಬುಕಂ ಕಂಡು, ಇದೇ ವೇಳೆಯಲ್ಲು ಕೊಲ್ಲ ಬೇಕೆಂದು, ಹೇಳಿ, ವಾಯಸರಾಜನಂ ಕರಿಸಿ—ನೀವು ಹೋಗಿ, ಗಜರಾಜನ ಮೈಯ ರಕ್ತಮಂ ಮಾಡಿ! ಎಂದು, ಮಕ್ಷುಕನಂ ಕರದು—ಅದರ ಘಾಯಂಗಳಂ ಮುತ್ತಿ, ಕಣ್ಣಂ ಕುರುಡು ಮಾಡು! ಎಂದು, ಈ ಮಂಡೂಕನಂ ಕರದು, ಒಂದು ದೊಡ್ಡಿತಾದ ಹಾಳುಭಾವಿಯ ತೋರಿ—ನೀನು ಇಲ್ಲಿ ಒದರಲಾಗಿ ಆ ಗಜವು ಉದಕದ ತೃಷೆಯಿಂದ ಬಂದು, ಈ ಭಾವಿಯಲ್ಲು ಬಿದ್ದೀತು ಎಂದು, ಹೇಳಿ, ಅವರಂ ಕಳುಪಿ, ತಾನು ಒಂದು ಕೆಲದಲ್ಲು ನಿಂದು, ನೋಡುತ್ತಿರಲು, ಆ ವಾಯಸಂ ಆ ಗಜರಾಜನೆಡೆಗೆ ಬಂದು, ಮೈಯ ತಿಂಡಿಯ ಕಳೆಯಲು, ಆ ಗಜಂ ಮದಾಲಶ್ಯದಿಂ ಮೈ ಮರತು ಇರಲು; ಕುದುರೆಗಳಿಗೆ ಮೈಯನೊರಸಿದರೆ ಮಹಾ ಸಂತೋಷ, ಆನೆಗಳಿಗೆ ಮೈಯ ತಿಂಡಿಯ ಕಳದರೆ ಮಹಾ ಸಂತೋಷ, ಗೋವುಗಳಿಗೆ ದೂರಕ್ಕೆ ಹೋಗಿ ಮೆದ್ದು ಬಂದರೆ ಮಹಾ ಸಂತೋಷ, ದುರ್ಜನಗೆ ಪರನಿಂದೆಯನಾಡಿದರೆ ಮಹಾ ಸಂತೋಷ, ಇಂತೆಂಬ ನೀತಿಯುಂಟಾಗಿ, ಆ ಗಜಂ ವಾಯಸಂಗಳಿಗೆ ತನ್ನ ಮೈಯ ನೊಡ್ಡಿ ಕೊಂಡಿರಲಾಗಿ; ವಾಯಸಗಳು ಗಜದ ಮೈಯನೆಲ್ಲಾ ಕುಕ್ಕಿ, ಘಾಯಮಂ ಮಾಡಿ, ರಕ್ತವಂ ಮಾಡಿ ಹೋಗಲು; ಮಕ್ಷುಕರಾಜಂ ಬಂದು, ಗಜದ ತನುವಿನ ರಕ್ತಪಾನಮಂ ಮಾಡಿ, ಹುಳಸಿ, ಕಣ್ಣಂ ಮುತ್ತಿ ಕುರುಡು ಮಾಡಲು; ಗಜಂ ಕ್ರಿಮಿಗಳ ತರಿತದಿಂ ಮಹಾ ಬಳಲಿ, ಉದಕದ ತೃಷೆ ಹುಟ್ಟಿ, ನೀರಂ ಕಾಣಲರಿಯದೆ, ಅರಣ್ಯದೊಳು ತೊಳಲುತ್ತಿರಲು; ಹಾಳುಭಾವಿಯಲ್ಲು ಕಪ್ಪೆಗಳು ಕಲೆಯುತ್ತಿರಲು;—ಕೋಗಿಲೆಯು ಮಾವಿನ ಹಣ್ಣಿನ ರಸಂ ಸೇವಿಸಿ, ಝಾವಕ್ಕೊಮ್ಮೆ ಸ್ವರಂ ಗೈವುದು; ಕಪ್ಪೆಯು ಬಚ್ಚಲ ಉದಕಮಂ ಕುಡಿದು, ವಟವಟಾಯೆನುತ್ತಿಹುದು; ಈ ಪ್ರಕಾರದಿಂದ ಕಪ್ಪೆಯು ಹಾಳುಭಾವಿಯಲ್ಲು ವಟವಟಾಯೆನುತ್ತಿರಲು; ಗಜಂ ಕಪ್ಪೆಯ ಧ್ವನಿಯಂ ಕೇಳಿ, ಉದಕದ ಸ್ಥಳವೆಂದು ಬಗದು, ಹಾಳುಭಾವಿಯಲ್ಲು ಬಿದ್ದು ಕೆಟ್ಟಿತು.

ಅದು ಕಾರಣದಿಂದನರ್ಥವಾಗಿ ಕೆಡ ಬೇಡ; ದೇಶಾಂತರಿಯಾಗು! ಅನೇಕರು ಮಿತ್ರರ ಮಾತಂ ಬಗೆಯದೆ, ಹಾನಿಗೊಂಡರದೆಂತೆನೆ—

## ೨೨ನೇ ಕಥೆಯ ಮೊದಲಿನ ಭಾಗ.

ಬುದ್ಧಿ ಕೇಳದ ಮೀನುಗಳು ಕೆಟ್ಟದ್ದು.

ವಿಂಧ್ಯಾವಾಸವೆಂಬ ವನಾಂತರದಲ್ಲು ವಿಮಲಸರಸಿಯೆಂಬ ಸರೋವರದಲ್ಲು ಅನಾಗತವಿಧಾತನೆಂದು, ಪ್ರತ್ಯುತ್ಪನ್ನಮತಿಯೆಂದು, ಯದ್ಭವಿಷ್ಯನೆಂದು ಈ ಮೂವರು ಮತ್ಸ್ಯಂಗಳು ತಮ್ಮ ಪುತ್ರ ಮಿತ್ರ ಕಳತ್ರರಂ ಕೂಡಿ ಕೊಂಡು, ಸುಖದಿಂದಿರಲು; ಒಂದು ದಿವಸಂ ಒಬ್ಬ ಬೇಂಟೆಗಾರಂ ಆ ಪಥದಲ್ಲು ಹೋಗುತ್ತಂ, ಮಹಾ ನೀರುತೃಷೆಯಿಂ ಸರೋವರಕ್ಕಂ ಬಂದು, ಉದಕಪಾನವಂ ಮಾಡಿ, ತನ್ನ ಬಳಲಿಕೆಯನ್ನು ಕಳದು, ಆ ಸರೋವರದಲ್ಲು ಚರಿಸುವಂಥಾ ಮತ್ಸ್ಯಂಗಳಂ ಕಂಡು, ಇಂಥಾ ಮೀನುಗಳಂ ಎಂದೂ ಕಂಡುದಿಲ್ಲವೆಂದು, ಬೆರಗಾಗಿ, ನಾಳೆ ಬಂದು ಈ ಮೀನುಗಳಂ ಹಿಡಿದೊಯಿವೆನೆಂದು, ನುಡಿದು, ಹೋಗಲಿತ್ತಲು ಆ ಮೂರು ಮತ್ಸ್ಯಂಗಳು ಕಂಡು, ತಮ್ಮೊಳಾಲೋಚಿಸಿ ಕೊಂಡು, ಅನಾಗತವಿಧಾತನೆಂಬ ಮತ್ಸ್ಯಂ, ಈ ಸ್ಥಳವ ಬಿಟ್ಟು ಹೋಗ ಬೇಕೆಂದು, ಹೇಳಲು; ಆ ಯದ್ಭವಿಷ್ಯನೆಂಬ ಮೀನಂ—ನಮ್ಮನ್ನಾರು ಹಿಡಿದಾರು? ನಾವಾರಿಗೆ ಶಿಕ್ಕಿ ಹೋದೇವು? ಇದೇನು ಕಾರ್ಯವಿದ್ದೀತು? ಪಿತೃಗಳಿದ್ದ ಈ ಸ್ಥಳವ ಬಿಟ್ಟು ಹೋಗ ಬಾರದೆಂದು, ಮಹಾ ಗರ್ವದಿಂ ನುಡಿಯಲು; ಮೂರ್ಖರ ಗೊಡವೆ ನಮಗೇಕೆಂದು, ಪ್ರತ್ಯುತ್ಪನ್ನಮತಿಯಂ ಕರದು, ನೀನೇನು ಬುದ್ಧಿಯಂ ಕಂಡಿ? ಎನಲು; ಸುಮ್ಮನೆ ಬಯಲ ಮಾತಿಗೆ ಈ ಸ್ಥಳವ ಬಿಟ್ಟು ಹೋಗ ಬಾರದು; ಅದು ಮಹಾ ಹೀನ ಬುದ್ಧಿ; ಆ ಬೇಂಟೆಗಾರ ಬಂದ ಕಾಲಕ್ಕೆ ಇಲ್ಲಿಯೇ ಒಂದು ಉಪಾಯಮಂ ಕಾಣ ಬೇಕೆನಲು; ಅನಾಗತವಿಧಾತನೆಂಬ ಮತ್ಸ್ಯನು—ಇನ್ನಾವುದೂ ಕಾರ್ಯವಲ್ಲಾ, ಈ ಸ್ಥಳವನ್ನು ಬಿಟ್ಟು ಹೋ

ಹುದೇ ಕಾರ್ಯ! ನನ್ನ ಮಾತಂ ಕೇಳಿ! ಮಿತ್ರರ ಮಾತಂ ಕೇಳದೆ ಕೆಟ್ಟು ಹೋದವರೆಷ್ಟೋ ಮಂದಿ ಉಂಟು! ಎನಲದೆಂತೆನೆ—

## ೨೩ನೇ ಕಥೆ.

### ಬುದ್ಧಿ ಕೇಳದ ಆವೆ ಕೆಟ್ಟದ್ದು.

ನಿರ್ಮಲಸರಸಿಯೆಂಬ ಸರೋವರದಲ್ಲಿ ಹಿರಣ್ಯವರ್ಮನೆಂಬುದೊಂದು ಕೂರ್ಮಂ ಸುಖದಿಂದಿರಲು; ಆ ಸರೋವರದ ತೀರದಲ್ಲು ವೃಕ್ಷತತಿ ಇರಲು; ಮೇಲ್ಗಂಗೆಯ ತೀರದಲ್ಲು ಇಹಂಥ ವಿಕಟ ಸಂಕಟನೆಂಬ ಹಂಸಿಗಳು—ವಸಂತಕಾಲದಲ್ಲು ಕೆಳಗಿನ ಶೀಮೆಯಲ್ಲು ಮಹಾ ಸೌಖ್ಯವೆಂದು ಹೇಳುವರು, ಅದಂ ನೋಡ ಬೇಕೆಂದು, ಆ ಎರಡು ಪಕ್ಷಿಗಳು ಸಕಲ ವನಂಗಳಂ ನೋಡುತ್ತ ಬರುತ್ತಿರಲು; ಈ ನಿರ್ಮಲಸರಸಿಯಂ ಕಂಡು, ಮಹಾ ಬೆರಗಾಗಿ, ಇಂಥಾ ಸರಸಿಯು ಇಂನೆಲ್ಲಿಯೂ ಇಲ್ಲವೆಂದು, ಆ ವನದೊಳು ಆಶ್ರಯಮಂ ಮಾಡಿ ಕೊಂಡು, ಜಿಹ್ವಾಸ್ವಾದುವಾದ ಹಣ್ಣಂ ಮೆದ್ದು, ಆ ಸರೋವರದಲ್ಲಿ ನಿರ್ಮಲ ಉದಕಮಂ ಕುಡಿದು, ಕೆಲವು ದಿನಂ ಸುಖದಿಂದಿರಲು; ಒಂದಾನೊಂದು ದಿವಸಂ ಈ ರಾಜಹಂಸಂಗಳು ಆ ಸರಸಿಯ ತೀರದಲ್ಲು ಇದ್ದ ಚೂತವೃಕ್ಷಮಂ ಹತ್ತಿ, ಪಣ್ಗಳಂ ಭುಂಜಿಸುತ್ತಿರಲು; ಕೆಲವು ಹಣ್ಣಂ ಹಂಸಗಳು ಉದುರಿಸಲು; ಅದು ಆ ಸರಸಿಯೊಳು ಬೀಳಲು; ಅಲ್ಲಿ ಇದ್ದ ಕೂರ್ಮನು ಈ ಹಣ್ಣಂ ಸವಿದು, ಸಂತೋಷಂ ಬಟ್ಟು, ಈ ಪಕ್ಷಿಗಳೊಡನೆ ಮಿತ್ರತ್ವಮಂ ಮಾಡಿ ಕೊಳ ಬೇಕೆಂದು, ಮಹಾ ಪ್ರೇಮದಿಂ ಪಕ್ಷಿಗಳೊಡನೆ ಮಿತ್ರತ್ವ ಮಾಡಿ ಕೊಂಡು, ಕೆಲವು ದಿವಸ ಸುಖದಿಂದಿರಲು; ಆ ವಸಂತಕಾಲಂ ಹೋಗಿ, ಮಹಾ ಕಾರ್ಗಾಲಂ ಬರಲು; ಇನ್ನು ನಾವು ಇರ ಬಾರದೆಂದು, ಆ ಕೂರ್ಮಗೆ ಹೇಳಿ, ನಾವು ನಮ್ಮ ಮೇಲ್ಗಂಗಾತೀರಕ್ಕೆ ಹೋಹೆವೆನಲು; ನನ್ನನ್ನು ಕರದೊಯಿ! ಎನಲು; ನಾವು ಪಕ್ಷಿಗಳು, ಖೇಚರರು; ನೀನು ಭೂಚರನು; ಅದು ಕಾರಣ ನಮ್ಮ ಸಂಗಡ ಬಾಹದಕ್ಕೆ ಉಪಾಯವಿಲ್ಲ ಎನಲು; ನೀನು ಇಲ್ಲಿಯೇ ಇರು, ನಾವು ಕಾಲಕಾಲಕ್ಕೆ ಬಂದು ನೋಡಿ ಹೋದೇವು, ನೀನು ಇಲ್ಲಿ ಸು

ಖದಿಂದಿರು ಎಂದು, ಹೇಳಲವರ ಮಾತಂ ಕೇಳದೆ, ಆವ ಪ್ರಕಾರದಲ್ಲಾದರೂ ತನ್ನನ್ನು ಕರಕೊಂಡು ಹೋಗಿ, ಅಲ್ಲದಿದ್ದರೆ ನಾನು ಪ್ರಾಣತ್ಯಾಗವ ಮಾಡುವೆನೆನಲು; ಆ ರಾಜಹಂಸಗಳು ಮಹಾ ವ್ಯಾಕುಲಂಗೊಂಡು, ಇದಕ್ಕಿನ್ನೇನು ಉಪಾಯ ಮಾಡುವೆವೆಂದು, ತಮ್ಮೊಳಾಲೋಚಿಸಿ ಕೊಂಡು, ಒಂದು ಕಾಷ್ಟಮಂ ತಂದು, ಈ ಕೂರ್ಮಂಗೆ ಬುದ್ಧಿಯಂ ಹೇಳಿ, ನೀನು ಮಾತನಾಡದೆ ಅತಿ ಪರಾಮರಿಕೆಯಲ್ಲಿ ಬಾ! ಎಂದು, ಆ ಕಾಷ್ಟದ ನಡುವೆ ಕೂರ್ಮನಂ ಕಚ್ಚಿಸಿ, ತಾವೀರ್ವರು ಆ ಕಾಷ್ಟದ ಎರಡು ಕಡೆಯಂ ಕಚ್ಚಿ ಕೊಂಡು ಹೋಗಲು; ಆ ಸಮಯದಲ್ಲು ಒಬ್ಬ ಜಂಬುಕಂ ಬಂದು—ಎಲೇ ಕೂರ್ಮಾ, ಈ ಹಂಸಂಗಳು ವಿಶ್ವಾಸಘಾತಕ ಪಕ್ಷಿಗಳು, ಆಕಾಶಮಾರ್ಗದಲ್ಲು ಹೋಹವು, ಅವಂ ನಂಬಿ ಅಸುನಾಶಕ್ಕಂ ಏಕೆ ಹೋಗುತ್ತಿದ್ದೀ? ಎನಲು; ಆ ಕೂರ್ಮಂ—ನಾನೇನು ನಿನ್ನ ಹಾಗೆ ಅಪ್ರಬುದ್ಧನೇ? ನನ್ನ ಮಿತ್ರರ ಸಂಗಡದಲ್ಲು ಹೋಗುತ್ತಿದ್ದೇನೆಂದು, ಆ ಜಂಬುಕನ ಕೂಡೆ ಈ ಮಾತು ಹೇಳುವದಕ್ಕೆ ಆ ಕಚ್ಚಿದ ಕಾಷ್ಟಮಂ ಬಿಡಲಾಗಿ; ಆ ಕೂರ್ಮಂ ಕೆಳಗೆ ಬಿದ್ದು, ಸತ್ತು ಹೋಯಿತು.

## ೨೨ನೇ ಕಥೆಯ ಎರಡನೇ ಭಾಗ.

ಅದು ಕಾರಣದಿಂ ಮಿತ್ರರ ಮಾತು ಕೇಳ ಬೇಕು, ಕೇಳದಿದ್ದರೆ ಕೂರ್ಮನ ಪಾಟಿ ಕೆಡುವರೆಂದು, ಅನಾಗತವಿಧಾತನೆಂಬ ಮತ್ಸ್ಯಂ ಈ ಕಥೆಯಂ ಪ್ರತ್ಯುತ್ಪನ್ನಮತಿಯೆಂಬ ಮತ್ಸ್ಯನ ಕೂಡೆ ಹೇಳಿ—ನೀವು ಬಂದರೆ ಬನ್ನಿ, ಒಲ್ಲದಿದ್ದರೆ ಬಿಡಿ! ಎಂದು, ತನ್ನ ಪುತ್ರ ಮಿತ್ರ ಕಳತ್ರಾದಿಗಳಂ ಕೂಡಿ ಕೊಂಡು, ಆ ರಾತ್ರೆಯಲ್ಲು ಮತ್ತೊಂದು ಸರೋವರಕ್ಕಂ ಹೋಗಲು; ಮರು ದಿವಸಂ ಆ ಬೇಂಟೆಗಾರಂ ಬಂದು, ಈ ಸರೋವರಕ್ಕಂ ಬಲೆ ಹಾಕಲು; ಆ ಎರಡು ಮತ್ಸ್ಯಂಗಳೂ ತಮ್ಮ ಬಂಧು ಬಳಗಂಗಳು ಸಹಾ ಶಿಕ್ಕಿ, ಸತ್ತು ಹೋದವು.

ಸಂಜೀವಕಂ ಆ ಕಥೆಯಂ ಕೇಳಿ, ನಾಳೆ ಸಿಂಹರಾಜನ ದುಷ್ಟ ಬುದ್ಧಿಯನರಿಯುವ ಪರಿಯಾವುದೆನಲು;

ನೆತ್ತರವುಳ್ಳ ಕಣ್ಣು, ಗಂಟು ಹಾಕಿದ ಹುಬ್ಬು, ತುಟಿಗ
ಳಂ ನೆಕ್ಕುವ ನಾಲಿಗೆ, ಇವೇ ಸಿಂಹನ ದುಷ್ಟ ಬುದ್ಧಿಯ
ಲಕ್ಷಣಂಗಳು; ಯುದ್ಧಾಸಕ್ತನಾಗಿದ್ದರೆ ಇವನ್ನು ಕಂ
ಡಾಗಲೇ ಸ್ವಜೀವಲಾಭಕ್ಕಂ ಕೊಂಬಂ ತಗ್ಗಿಸಿ ಕೊಂಡು,
ಹಾರಿ ಬಂದು, ಇರಿಯೆಂದು, ಆ ದಮನಕಂ ನುಡಿದು,
ಕರಟಕನ ಬಳಿಗಂ ಪೋಗಿ, ತಾನು ವೈರತ್ವದ ಬೀಜವಂ
ಬಿತ್ತಿದೆನೆನಲು; ಇವಂ ದುಃಖಿಸಲು; ಮರು ದಿನ ಪ್ರಾತಃ
ಕಾಲದಲ್ಲು ಸಿಂಹರಾಜಂ ಆ ಸಂಜೀವಕನ ಧ್ಯಾನದಲ್ಲಿ ರ
ಲು; ಆ ವೃಷಭನು ಈ ಸಿಂಹ ಇಹ ಗುಹೆಗಂ ಬರುತ್ತಾ,
ಸಿಂಹನ ವಿಕಾರ ಲಕ್ಷಣಂಗಳಂ ಕಂಡಾಗಲೇ ತಲೆಯಂ
ತಗ್ಗಿಸಿ ಕೊಂಡು, ಅತಿ ವೇಗದಿಂದಿರಿಯ ಬರುತ್ತಿರಲು;
ಅದಂ ಈ ಸಿಂಹ ನೋಡಿ, ಸಂಜೀವಕನೊಡನೆ ಯುದ್ಧ
ಮಂ ಮಾಡಲು;

### 6. ಆ ಎರಡು ಜಂಬುಕಗಳ ಮೂರನೇ ಸಂಭಾಷಣೆ.

ಕರಟಕಂ ರಕ್ತಧಾರೆಯಂ ಕಂಡು—ಎಲೇ ದಮನ
ಕಾ, ಆ ಈರ್ವರಿಗೆ ಮಿತ್ರಭೇದವನಿಕ್ಕಿದ್ದು ಬುದ್ಧಿಯಿಂ
ದಾದದಲ್ಲ; ಸ್ವಾಮಿಗೆ ಘಾಯಂ ತಾಗೀತು; ಸಂಜೀವಕ
ನುಳಿದರೆ ನಮ್ಮ ಗತಿಯೇನಹುದು? ಮೂಢನೇ, ನಿನ್ನಿಂ
ದಾದ ವಿರೋಧಂ ವಿಹಿತವಾದದಲ್ಲ; ಭಿನ್ನಸಂಧಾನದಲ್ಲಿ
ಯೇ ಮಂತ್ರಿಗಳ ಬುದ್ಧಿ ಪರೀಕ್ಷೆ! ಮೂಢನಾದ ನೀನು
ಮಂತ್ರಿಪದವಿಯನಭಿಲಾಷಿಸುವದೆಂತು? ಆದರೆ ಮೂ
ರ್ಖರ ಉಪದೇಶದಿಂದೇನು? ಅದೆಂತೆನೆ—

## ೨ಳನೇ ಕಥೆಯ ಮೊದಲಿನ ಭಾಗ.

### ಬುದ್ಧಿ ಕೇಳದ ಟಿಟ್ಟಿಭವೂ ಗೊರವಂಕವೂ ಕೆಟ್ಟದ್ದು.

ಗೌಂಡ್ವಟವಿಯೆಂಬ ವನಾಂತರದಲ್ಲು ಟಿಟ್ಟಭನೆಂಬ ಪಕ್ಷಿಯು ಒಂದು ವೃಕ್ಷದ ಮೇಲೆ ಗೂಡಂ ಮಾಡಿ ಕೊಂಡು, ಕೆಲವು ಕಾಲ ಸುಖದಿಂದಿರಲಾ ನೆರೆಯಲಿರ್ದುದೊಂದು ಗೊರವಂಕಪಕ್ಷಿಯು ಟಿಟ್ಟಭನಂ ಕಂಡು, ಸೈರಿಸಲಾರದೆ, ಆ ಗೂಡಂ ತನ್ನದು ಮಾಡಿ ಕೊಳ ಬೇಕೆಂದು, ಮಹಾ ದುರ್ಜನಿಕೆಯಂ ಮಾಡಲು;—ಮೃಗತತಿಯು ವನಾಂತರದೊಳಗೆ ತೃಣವಂ ಭಕ್ಷಿಸಿ ಕೊಂಡು ಇರಲು ಬೇಂಟೆಗಾರರು ಮಹಾ ಧೈರ್ಯತ್ವದಿಂದ ಕೊಲುವರು, ಮೀನುಗಳು ಜಲದೊಳಗೆ ಸುಖದಿಂದಿರಲು ಬಲೆಗಾರರು ವೈರಿಗಳಾಗಿ ಕೊಲುವರು, ಸಜ್ಜನರ ಚಾಡಿಕಾರರು ಕಾಮಾಕಾರದಿಂ ಸೈರಿಸಲಾರದೆ ವೈರತ್ವದಿಂದ ಕೆಡಿಸುವರು; ಇಂತೆಂಬ ನೀತಿಯುಂಟಾಗಿ, ಗೊರವಂಕಪಕ್ಷಿಯು ಮಹಾ ವೈರತ್ವದಿಂದ ಟಿಟ್ಟಿಭನಂ ಕಂಡು, ಸೈರಿಸಲಾರದೆ, ತಾನು ತನ್ನೊಳಗೆ ಬೇವುತ್ತಿರಲು; ಒಂದು ದಿನಂ ಈ ಟಿಟ್ಟಿಭನು ತನ್ನ ಆಹಾರಾರ್ಥವಾಗಿ ವನಾಂತರಕ್ಕೆ ಹೋಗಲಾ ಸಮಯದಲ್ಲು ಗೊರವಂಕನು ಆ ಗೂಡಂ ಹೊಗಲು; ಟಿಟ್ಟಿಭಂ ಬಂದು—ಇದೇನೈ? ನನ್ನ ಗೂಡ ಹೊಕ್ಕು ಇಹ ಕಾರಣವೇನೆಂದು, ಕೇಳಲು; ಗೊರವಂಕ—ನಿನಗೆಲ್ಲಿಯ ಗೂಡು? ಇದು ನನ್ನ ಗೂಡು; ನನ್ನ ಪಿತೃಗಳು ಆರ್ಜಿಸಿದಂಥಾ ಗೃಹ ನಿನಗೆಲ್ಲಿಯದೆನಲು; ತಮ್ಮೊಳಗೆ ತಾವೇ ವಾಗ್ವಾದಂ ಮಾಡಿ ಕೊಂಡು, ಸಮಸ್ತ ಪಕ್ಷಿಗಳ ಬಳಿಗಂ ಹೋಗಿ, ನ್ಯಾಯಗಳಂ ಕೇಳಲಾಗಿ; ಆ ಪಕ್ಷಿಗಳು ಇಬ್ಬರನ್ನು ಜರದು—ನೀವು ಮಹಾ ಅಪ್ರಬುದ್ಧರು; ಪಕ್ಷಿಗಳಿಗೆ ಎಲ್ಲಿಯಾದರೂ ಗೃಹಕ್ಷೇತ್ರ ಉಂಟೇ? ಇದ್ದ ಬಳಿಯಲ್ಲಿ ಇಹಣ; ಎಲ್ಲಾ ವಾಗ್ವಾದಮಂ ಬಿಟ್ಟು ಸೌಜನ್ಯದಲ್ಲಿ ಇರುವುದೆಂದು, ಬುದ್ಧಿಯಂ ಹೇಳಲಾ ಎರಡು ಪಕ್ಷಿಗಳು ಇವರ ಬುದ್ಧಿಯಂ ಕೇಳದೆ, ಮಹಾ ಮೂರ್ಖತನದಿಂ, ತಾವು ಅರಸುಗಳ ಬಳಿಗಾಗಿ ಹೋಗಿ ನ್ಯಾಯಮಂ ಕೇಳಿಯೇವು ಎನಲಾಗಿ; ಅಲ್ಪ ಕಾರ್ಯಕ್ಕೆ ರಾಜದ್ವಾರಕ್ಕೆ ಹೋಗ ಬಾರದು, ಹೋದರೆ ಕೆ

ಡುವರೆಂದು, ಆ ಪಕ್ಷಿಗಳೆಲ್ಲಾ ಈ ಪಕ್ಷಿಗಳಿಗೆ ಒಂದು ಕಥೆಯಂ ಹೇಳಿದರದೆಂತೆನೆ—

## ೨೫ನೇ ಕಥೆ.

### ಅನರ್ಥ ಕೋಪಕ್ಕೆ ಕೆಟ್ಟದ್ದು.

ಜಾಂಗಲ ದೇಶದಲ್ಲಿ ಶಾಖಾಪುರವೆಂಬ ಪಟ್ಟಣ; ಆ ಪುರಕ್ಕೆ ವಿಶಾರದನೆಂಬ ರಾಯಂ ಸುಖದಿಂ ರಾಜ್ಯವನಾಳುತ್ತಂ ಇರಲು; ಒಂದು ದಿನಂ ರಾಯಂ ತನ್ನಲಿರ್ದ ಬೇಂಟೆಗಾರರಂ ಕರಸಿ, ತನ್ನ ವೈದ್ಯರ ಕರಸಿ, ಶರೀರಕ್ಕೆ ಹಿತವಾದ ವಸ್ತು ಆವುದು? ಎಂದು, ಕೇಳಲು; ಇವರು ಹೇಳಿದಂತೆ ಆ ರಾಯಂ ತನ್ನಲಿರ್ದ ಬೇಂಟೆಗಾರರಿಗೆ—ಉದಯದಾರೋಗಣೆಗೆ ಮೃಗತತಿಯಂ ತಂದು ಕೊಡಿ, ಬಯಿಗಿನ ಆರೋಗಣೆಗೆ ಪಕ್ಷಿಗಳಂ ತಂದು ಕೊಡಿ! ಎಂದು, ಕಟ್ಟಳೆಯಂ ಮಾಡಿ, ಇಂತು ಕೆಲವು ಕಾಲ ನಡವುತ್ತಿರಲು; ಒಂದು ದಿನಂ ಆ ಪಕ್ಷಿಗಳಂ ತಹ ಬಲೆಗಾರರು ತಮ್ಮ ಗೃಹಕಾರ್ಯದಿಂ ರಾಜಾಜ್ಞೆಯಂ ಮರತು ಬಿಟ್ಟು, ಅಸ್ತಮಯ ಕಾಲವಾಗಲಾಗಿ; ಆ ಬೇಂಟೆಗಾರರು, ರಾಯನಾರೋಗಣೆಗೆ ಪಕ್ಷಿಗಳಂ ತಂದುದಿಲ್ಲವೆಂದು, ಮಹಾ ಭೀತಿಯಿಂದ ನಡನಡುಗಿ, ಕಂಗೆಟ್ಟು, ಅತಿ ವೇಗದಿಂದೊಂದು ವನಾಂತರಕ್ಕಂ ಹೋಗಿ, ಪಕ್ಷಿಗಳಂ ಅರಸಿ ಕಾಣದೆ, ಚಿಂತೆಯಿಂ ಬರುತ್ತ, ಒಂದು ಜೇನಂ ಕಂಡು, ಅದಂ ಮುರಿದು ಕೊಂಡು, ರಾಯನೆಡೆಗಂ ಬಂದು—ಎಲೇ ಸ್ವಾಮಿ, ಇಂದೆಲ್ಲಿಯೂ ಪಕ್ಷಿಗಳು ಶಿಕ್ಕಿದುದಿಲ್ಲ, ಇದೊಂದು ಅಪೂರ್ವವಾದ ಜೇನಂ ತಂದೆವೆಂದು, ರಾಯಂಗೆ ಕಾಣಿಕೆಯಂ ಕೊಡಲು; ರಾಯಂ, ಪಕ್ಷಿಗಳಂ ತಂದುದು ಇಲ್ಲವೆಂದು, ಕೋಪದಿಂದಿವರಂ ಎಕ್ಕರಿಸಿ ನುಡಿಯಲು; ಆ ಸಮಯದಲ್ಲು, ಈ ಜೇನಂ ಭಕ್ಷಿಸುವೆನೆಂದು, ಒಂದು ಮಕ್ಷುಕಂ ಈ ಜೇನಿನ ಮೇಲೆ ಕುಳ್ಳಿರಲು; ಆ ಚಾವಡಿಯ ಕಂಭದಲ್ಲು ಇದ್ದ ಪಲ್ಲಿಯು ಬಂದು, ಆ ಮಕ್ಷುಕನಂ ಹಿಡಿಯಲು; ರಾಯನ ತೊಡೆಯ ಮೇಲೆ ಕುಳುತಿರ್ದ ಮುಂಗುಲಿಯು ಬಂದು, ಈ ಪಲ್ಲಿಯಂ ಹಿಡಿಯಲು; ಆ ಬೇಂಟೆಗಾರರ ಸಂಗಡ ಬಂದ ಶ್ವಾನಂ ಆ ಮುಂಗುಲಿಯಂ ಹಿಡಿಯಲು;

ರಾಯಂ, ತಾನು ಸಾಂಕಿದ ಮುಂಗುಲಿಯಂ ಹಿಡಿದು ಕೊಂದಿತೆಂದು, ಆ ಶ್ವಾನವಂ ಹರಿಯ ಹೊಯ್ಯಲು; ಆ ಬೇಂಟೆಗಾರರು, ತಮಗೆ ಹಿತ ವಾದ ಕುಕ್ಕುರನಂ ಹರಿಯ ಹೊಯಿದನೆಂದು, ರಾಯನಂ ಕಡಿದು, ಬಿಸಾಡಲಾಗಿ; ಆ ಪಟ್ಣವೆಲ್ಲಾ ಗಲುಕಾಗಿ, ಸೂರೆಯಾಗಿ ಹೋಯಿ ತು. ಅದು ಕಾರಣ, ಅಲ್ಪಕಾರ್ಯಕ್ಕೆ ಕೋಪವ ಮಾಡಿಯೇನೆಂದು, ಆ ಮಹಾರಾಯನು ಕೆಟ್ಟನು.

## ೨ಳನೇ ಕಥೆಯ ಎರಡನೇ ಭಾಗ.

ಎಲೇ ಪಕ್ಷಿಗಳಿರಾ, ನೀವಿಬ್ಬರು ಕೋಪವ ಮಾಡಿ ಕೊಂಡು ರಾಜ ದ್ವಾರಕ್ಕೆ ಹೋದರೆ ಕೆಡುವಿರಿ ಎಂದು, ಹೋಗ ಬೇಡವೆನಲು;—ದಿವ್ಯ ರತ್ನದ ಹಾರ ಮರ್ಕಟಂಗೆ ಶಿಕ್ಕಿದರೆ ಏನೂ ಪ್ರಯೋಜನವಿಲ್ಲಾ, ಷಡ್ರ ಸಾನ್ನದಲ್ಲಿ ಗರ್ದಭಂಗೆ ಏನೂ ಪ್ರಯೋಜನವಿಲ್ಲಾ, ಕಿವುಡನ ಕೂಡೆ ಸಂಗೀತ ಹಾಡಿದರೆ ಏನೂ ಪ್ರಯೋಜನವಿಲ್ಲಾ, ದೃಷ್ಟಿಯಿಲ್ಲದವನ ಮುಂದೆ ದೀಪವ ಹೊತ್ತಿಸಿದರೆ ಏನೂ ಪ್ರಯೋಜನವಿಲ್ಲಾ, ಮೂರ್ಖ ರಿಗೆ ಧರ್ಮಕಥೆ ಹೇಳಿದರೆ ಏನೂ ಪ್ರಯೋಜನವಿಲ್ಲಾ; ಇಂತೆಂಬ ನೀ ತಿಯುಂಟಾಗಿ, ಈ ಮೂರ್ಖರಾದ ಎರಡು ಪಕ್ಷಿಗಳು ಮೃಗನಿಕರ ಹೇಳಿದ ಬುದ್ಧಿಯಂ ಕೈಕೊಂಡು ಇರದೆ, ಮೂರ್ಖತನದಿಂದ ಹೋದ ವು. ದುರ್ಜನರಾಗಿ ಇದ್ದವರಿಗೆ ಸಜ್ಜನರಾಗಿ ಇದ್ದವರು ಎಷ್ಟು ಬುದ್ಧಿ ಹೇಳಿದರೆಯೂ ತಮ್ಮ ಕುಬುದ್ಧಿಯನ್ನೇ ಕೈಕೊಂಬುವದಲ್ಲದೆ ಸುಬುದ್ಧಿ ಯನ್ನು ಕೈಕೊಳ್ಳರು; ಅದು ಕಾರಣದಿಂದ ಪಕ್ಷಿಗಳೆರಡು ವಿವಾದವ ನ್ನೇ ಮಾಡಿ ಕೊಂಡು,—ಆನೆಗೆ ಮದವೇ ಅಲಂಕಾರ, ಆಕಾಶಕ್ಕೆ ಮೇ ಘವೇ ಅಲಂಕಾರ, ರಾತ್ರೆಗೆ ಚಂದ್ರನೇ ಅಲಂಕಾರ, ಯತಿಗೆ ಗುಣವೇ ಅಲಂಕಾರ, ಕುದುರೆಗೆ ವೇಗವೇ ಅಲಂಕಾರ, ಗೃಹಕ್ಕೆ ನಿತ್ಯೋತ್ಸವವೇ ಅಲಂಕಾರ, ನುಡಿಗೆ ಶಬ್ದವೇ ಅಲಂಕಾರ, ನದಿಗೆ ರಾಜಹಂಸಗಳೇ ಅ ಲಂಕಾರ, ಆಸ್ಥಾನಕ್ಕೆ ವಿದ್ವಾಂಸರುಗಳೇ ಅಲಂಕಾರ, ಲೋಕದ ಮ ನುಷ್ಯರುಗಳಿಗೆ ಸತ್ಪುತ್ರರೇ ಅಲಂಕಾರ, ಭೂಮಿಗೆ ಅರಸುಗಳೇ ಅಲಂ ಕಾರ, ವಿಶ್ವಕ್ಕೆ ಸೂರ್ಯನೇ ಅಲಂಕಾರ; ಇಂತೆಂಬ ನೀತಿಯುಂಟಾಗಿ,

ನಾವು ಅರಸುಗಳ ಸಮೀಪಕ್ಕೆ ಹೋಗಿ, ನಮ್ಮ ನ್ಯಾಯಮಂ ತಿದ್ದಿ ಕೊಂಬೆವೆಂದು, ನೇತ್ರಾವತಿಪಟ್ಟಣದ ಜಯಸೇನನೆಂಬ ರಾಯನ ಬಳಿಗಂ ಹೋಗಿ, ತಮ್ಮ ವೃತ್ತಾಂತಮಂ ಹೇಳಿ, ನಮ್ಮ ನ್ಯಾಯಮಂ ತಿದ್ದಿ ಕೊಡಿ! ಎಂದು, ಹೇಳಲಾ ರಾಯಂ ಗಹಗಹಿಸಿ ನಕ್ಕು—ಪಕ್ಷಿಗಳಿಗೆ ನ್ಯಾಯ ಉಂಟೇ? ನಿಮ್ಮ ನೀವೇ ಸೊಸ್ತರಾಗಿ ಹೋಗಿ! ಎಂದೆನಲು; ಆ ಟಿಟ್ಟಿಭ—ಎಲೇ ರಾಯಾ, ನನ್ನನ್ನು ಕೇಳದೆ ಕಳುಹ ಬೇಡ, ನನ್ನ ಸತ್ವವನರಿದು ವಿಚಾರಿಸೆನೆ; ರಾಯಂ ಮಹಾ ವಿಸ್ಮಿತನಾಗಿ, ನಿನ್ನ ಪರಿಯೆಂತೆಂದು, ಬೆಸಗೊಳ್ಳಲು; ನಮ್ಮ ಮೈಯ ರಕ್ತಮಂ ತೆಗದು ಕೊಂಡು, ಕಂಠಗತನಾದ ಪ್ರಾಣದ ಪುರುಷನ ಚಿಂಮಿಸಲು, ಅವನು ಬದುಕುವನು ಎಂದು, ಹೇಳಲಾಗಿ; ಗೊರವಂಕನಿಂತೆಂದುದು—ಎಲೇ ರಾಯಾ, ನನ್ನ ಸತ್ವಮಂ ಕೇಳು; ನಿನಗೆ ವೈರಿಗಳಾಗಿ ಇದ್ದವರ ಮೇಲೆ ನನ್ನ ರಕ್ತಮಂ ಚಿಂಮಿಸಲು, ಅವರು ಹತವಹರೆನಲು; ರಾಯಂ ಕೇಳ್ದು, ಮಹಾ ಸಂತೋಷದಿಂದ, ಈ ಎರಡು ಪಕ್ಷಿಗಳು ನಮಗೆ ಬೇಕೆಂದು, ಆ ಪಕ್ಷಿಗಳ ಗೋಣಂ ಕೊಯಿಸಿದನು.

ಕರಟಕಂ ಆ ಕಥೆಯಂ ಮುಗಿಸಿ, ಮತ್ತಿಂತೆಂದುದು—

## ೨೬ನೇ ಕಥೆ.

### ಬುದ್ಧಿ ಕೇಳದ ವಿಪ್ರನು ಕಷ್ಟ ಪಟ್ಟದ್ದು.

ವಿಕಶೀಲನಗರವೆಂಬ ಪಟ್ಟಣದಲ್ಲು ವೀರ್ಯವಿಶಿಷ್ಟನೆಂಬ ರಾಯಂ ಮನೋಹರನೆಂಬ ಪ್ರಧಾನಂ ಸಹಿತ ಸುಖದಿಂ ರಾಜ್ಯವನ್ನಾಳುತ್ತ ಇರಲು; ಒಂದು ದಿವಸಂ ರಾಯಂ ಚಾಡಿಕಾರರ ಮಾತಂ ಕೇಳಿ, ಪ್ರಧಾನನಂ ಕೊಲಿಸಲು; ಆತಂ ಮಹಾ ನೊಂದು ಕೊಂಡು, ನನಗಿನ್ನೇತರ ಜನ್ಮವೆಂದು, ಅತಿ ವೈರಾಗ್ಯದಿಂ ಕಾಶಿಯಾತ್ರೆಗಂ ಹೋಗಲೊಂದು ವಿದ್ಯಾವಾಸವೆಂಬ ವನಾಂತರದಲ್ಲು ನಡವುತ್ತಿರಲು; ಒಂದು ದೊಡ್ಡಿತಾದ ಭಾವಿಯಲ್ಲು ಒಂದು ವಾನರನು, ಒಂದು ಸರ್ಪನು, ಒಬ್ಬ ಅಕ್ಕಸಾಲೆಯು, ಒಂದು ವ್ಯಾಘ್ರನು, ಈ ನಾಲ್ವರು ಬಿದ್ದು, ಮಹಾ ಶೋಕಂಗೈವುತ್ತಿರಲು; ಈ ರಾಯಂ ಕೇಳಿ, ಈ ಭಾವಿಯೆಡೆಗಂ ಬರಲೀತನಂ

ಕಂಡು, ಮಹಾ ದೈನ್ಯದಿಂದ—ಎಲೇ ಬ್ರಾಹ್ಮಣೋತ್ತಮನೇ, ನಮ್ಮ ತೆಗದು ರಕ್ಷಿಸ ಬಾರದೇ? ಎನಲು; ಈ ರಾಯಂ ಮಹಾ ಕೃಪೆಯಿಂದ ಹುಲಿಯಂ ತೆಗೆಯಲು; ಈ ಬ್ರಾಹ್ಮಣನಂ ಕೊಂಡಾಡಿ, ವಂದನೆಯಂ ಗೈದು—ನೀನು ಆ ವಾನರನಂ ಸರ್ಪನಂ ತೆಗದು ಹಾಕು; ಅಕ್ಕಸಾಲೆಯಂ ತೆಗೆಯ ಬೇಡ! ಎಂದು, ಹೇಳಿ, ಆ ಈರ್ವರು ಸಹ ತೆಗಸಿ ಕೊಂಡು, ಕಳುಹಿಸಿ ಕೊಂಡು ಹೋಗುತ್ತ, ಅಕ್ಕಸಾಲೆಯಂ ತೆಗೆಯ ಬೇಡ! ಎಂದು, ಹೇಳಿ, ತಮ್ಮ ತಮ್ಮ ಸ್ಥಳಕ್ಕೆ ಹೋದವು. ಇತ್ತಲೀ ಅಕ್ಕಸಾಲೆಯು—ಎಲೇ ಬ್ರಾಹ್ಮಣಾ, ಕ್ರೂರವಾದ ಮೃಗಗಳನ್ನೇ ತೆಗದಿ, ನಾನು ನಿನಗೆ ಅದರಿಂದ ಹೆಚ್ಚು ಉಪಕಾರ ಮಾಡ್ಯೇನು; ಮಹಾ ನದಿಗಳು, ಮಳೆಯು, ಹಣ್ಣಾದಂಥ ಮರಗಳು, ಉತ್ತಮನಾದ ಪುರುಷನು, ಬೆಳದಂಥ ಸಸ್ಯಗಳು, ಇವೈದು ವಸ್ತುಗಳು ಪರೋಪಕಾರವಾಗಿ ಹುಟ್ಟಿದ್ದಲ್ಲದೆ ತಮ್ಮ ಕಾರ್ಯಕ್ಕೋಸ್ಕರವಾಗಿ ಹುಟ್ಟಿದ್ದಲ್ಲ; ಅದು ಕಾರಣದಿಂ ನೀನು ನನ್ನ ತೆಗೆಯ ಬೇಕೆಂದು, ನಾನಾ ಪ್ರಕಾರದಿಂದೊಡಂಬಡಿಸಲು; ಈ ರಾಯಂ ಕರುಣದಿಂ ಅಕ್ಕಸಾಲೆಯನ್ನು ಮೇಲಕ್ಕೆ ತೆಗೆಯಲು; ಆ ವಿಪ್ರಂಗೆ ವಂದನೆಯಂ ಗೈದು, ಹೋಗಲಿತ್ತಲೀ ರಾಯಂ ಮಹಾ ಸಂತೋಷದಿಂ ಕಾಶಿಯಾತ್ರೆಯಂ ಹೋಗಿ, ತೀರ್ಥಸ್ನಾನವಂ ಮಾಡಿ, ಕಾವಡಿಯ ತರುತ್ತ, ಒಂದು ಅರಣ್ಯದೊಳು ನೀರುತೃಷೆಯಿಂ ಬಳಲಿ, ಮುಂದುಗಾಣದೆ, ತನ್ನೊಳಾಲೋಚನೆಯಂ ಗೈದು, ತಾನು ಉಪಕಾರ ಮಾಡಿದ ವಾನರನಂ ನೆನೆಯಲಾಗಿ; ಆ ವಾನರನು ಬಂದು, ಮಹಾ ಭಯಭಕ್ತಿಯಿಂದ, ನನ್ನ ಬರಸಿದ ಕಾರಣವೇನೆಂದು, ಬೆಸಗೊಳ್ಳಲು; ಮಹಾ ನೀರುತೃಷೆಯಿಂದ ಬಳಲಿದೆನೆನಲಾ ವಾನರಂ ಈ ವಿಪ್ರನಂ ತನ್ನ ಸ್ಥಳಕ್ಕಂ ಕರದೊಯಿದು, ಅಲ್ಲಿ ಉದಕವಂ ತೋರಿಸಿ, ಹಣ್ಣು ಹಂಪಲುಗಳಂ ತಂದು ಕೊಟ್ಟು, ಇವೆಲ್ಲಾ ನೀನು ಕೊಟ್ಟ ಭಾಗ್ಯವೆಂದು, ನಾನಾ ಪ್ರಕಾರದಿಂದುಪಚರಿಸಿ, ಆ ವಿಪ್ರಂಗೆ ದಿವ್ಯ ರತ್ನಂಗಳಂ ಕೊಟ್ಟು, ಈ ವಿಪ್ರನಂ ಹುಲಿ ಇದ್ದ ಸ್ಥಳಕ್ಕಂ ಕರದೊಯಿದು ಹೋಗಲು; ಆ ವ್ಯಾಘ್ರಂ ಕಂಡು, ಈ ವಿಪ್ರಂಗೆ ಅನೇಕ ಉಪಚಾರಂಗಳಂ ಮಾಡಿ, ಮಹಾ ಸಂತೋಷದಿಂದ ತನ್ನಲ್ಲಿ ಇದ್ದ ದಿವ್ಯಾಭರಣ ಸಮಸ್ತ

ವಸ್ತುಗಳಂ ಕೊಟ್ಟು, ಅಕ್ಕಸಾಲೆಯಂ ತೆಗದಿಯಾ? ಎಂದು, ಕೇಳಲು; ತೆಗದೆನೆನಲು; ಇನ್ನಾದರೂ ಅವನ ಬಳಿಗೆ ಹೋಗ ಬೇಡ! ಎನಲು; ಆ ರೀತಿಗಂ ಹೇಳಿ, ಹತ್ತೆಂಟು ಯೋಜನಂ ಬಂದು, ಈ ವಿಪ್ರನಂ ಕಳುಹಲು; ಈ ರಾಯಂ ಇವರೀರ್ವರಂ ಬೀಳ್ಕೊಟ್ಟು, ಇವರು ಸಂತೋಷದಿಂ ಹೋಗಿ, ತಮ್ಮ ಸ್ಥಳದಲ್ಲಿ ಇದ್ದವು. ಇತ್ತಲೀ ರಾಯಂ ಕುರುಹನರಿಯದೆ, ಅಕ್ಕಸಾಲೆ ಇದ್ದ ಪುರಕ್ಕಂ ಬಂದು, ಒಂದು ಧರ್ಮಸಾಲೆಯೊಳಿರಲು; ಅಕ್ಕಸಾಲೆಯು ಈ ವಿಪ್ರನಂ ಕಂಡು, ವಂದನೆಯಂ ಗೈದು, ವಿನಯ ನುಡಿಗಳಿಂದುಪಚರಿಸಿ, ತನ್ನ ಗೃಹಕ್ಕಂ ಕರದೊಯಿದು—ಇವೆಲ್ಲಾ ನೀನು ಕೊಟ್ಟ ಭಾಗ್ಯ, ನಿನ್ನ ಧರ್ಮ ಎಂದು, ಹೇಳಿ, ಉಪಚಾರಂಗಳಂ ಮಾಡಲು; ಈ ರಾಯಂ ಕಪಟವೆಂದರಿಯದೆ, ಅವನೊಡನೆ ಮಹಾ ನಂಬುಗೆಯಿಂದ ತನ್ನ ಕೈಯಲ್ಲಿದ್ದ ವಸ್ತುಗಳಂ ತೋರಿ, ಈ ರತ್ನಗಳಂ ಮಾರಿ ದ್ರವ್ಯಮಂ ತಂದು ಕೊಡು ಎನಲು; ಅವನು ಈ ರತ್ನಂಗಳಂ ತೆಗದು ಕೊಂಡು, ಅರಸಿನ ಸಮೀಪಕ್ಕಂ ಹೋಗಿ, ಇವನು ಮಹಾ ಕಳ್ಳನು ಎಂದು, ಹೇಳಿ, ಈ ವಿಪ್ರನಂ ತೋರಿಸಿ, ರತ್ನಂಗಳಂ ಕೊಡಲು; ಅರಸು ವಿಪ್ರನಂ ಬಂಧನವ ಮಾಡಿ ಕೊಂಡು ಇರಲಾಗಿ, ಆ ವಿಪ್ರಂ ಮಹಾ ಚಿಂತಾಕ್ರಾಂತನಾಗಿ, ತನ್ನೊಳಿಂತೆಂದಂ—ಸೂರ್ಯಗೆ ಗ್ರಹಣ ಪೀಡೆಯು, ಯುಕ್ತಿವಿದರಾದ ಸಜ್ಜನರುಗಳಿಗೆ ಅತಿದಾರಿದ್ರಪೀಡಣ; ಇಂತೆಂಬ ನೀತಿಯುಂಟಾಗಿ, ಹಲಬ ಬಾರದು ಎಂದು, ಮತಿವಂತನಾಗಿ—ಮುನ್ನ ನಾನು ಉಪಕಾರ ಮಾಡಿದ ನಾಲ್ವರೊಳಗೆ ವಾನರನೂ ವ್ಯಾಘ್ರನೂ ಉಪಕಾರ ಮಾಡಿದರು; ಅಕ್ಕಸಾಲೆ ಇನಿತು ವಿಧಿಗೆ ತಂದನು; ಇನ್ನು ಸರ್ಪನನ್ನು ನೆನವೆನೆಂದು, ಅನುಮಾನಿಸಲು; ಆ ಸರ್ಪಂ ಬಂದು, ವಿಪ್ರಂಗೆ ವಂದನೆಯಂ ಗೈದು, ಎಲೇ ಬ್ರಾಹ್ಮಣೋತ್ತಮಾ, ನನ್ನನ್ನು ನೆನದ ಕಾರಣವೇನೆಂದು, ಬೆಸಗೊಳ್ಳಲು; ಆ ಬ್ರಾಹ್ಮಣಂ, ಎಲೇ ಫಣಿರಾಯಾ, ಈ ವಿಪತ್ತು ಪರಿಹರಿಸ ಬೇಕೆಂದು, ಹೇಳಲು; ಆ ಸರ್ಪಂ—ಇದೇನು ಕಾರಣ ಇದ್ದೀತು? ನೀನು ಅಂಜಬೇಡವೆಂದು, ಸಂತೈಸಿ, ಆ ವಿಪ್ರನೊಡನಿಂತೆಂದುದು—ರಾಯನ ಪಟ್ಟದಾನೆಯು ಬಂದು ನೀರು ಕುಡಿಯುವಾಗ, ನಾನು ಅದರ ಸೊಂಡಿಲೊ

ಳಗೆ ಹೊಕ್ಕೇನು; ಅದಕ್ಕೆ ಮಹಾ ಉಪದ್ರವಾಗಿ, ಮೋವಂ ಕೊಳ್ಳದೆ ಇರಲಾಗಿ; ತಾನು ಮಾಣಿಸ್ಯೇನು ಎನಲಾಗಿ, ನಿನ್ನ ಕರದೊಯಿದು ಕೇಳಲು; ನೀನು ಕೈಕೊಂಡು, ನೀರೊಳಯಿಕ್ಕೆ ತೆಗಸಿ, ಆನೆಯ ಬಳಿಗಂ ಬಂದು, ಸುಮ್ಮನೆ ಮಂತ್ರಿಸಲು, ನಾನು ಈಸಿ ಹೋದೇನು; ಹೋಗ ಲಾಗಿ, ಆನೆ, ಉಪದ್ರ ತಗ್ಗಿ, ಮೋವಂ ಕೊಂಡೀತು; ಅದರಿಂದ ನಿನಗೆ ಬಹು ಸಂಪದವಾಗಿ, ನಿನ್ನ ಬಂಧನಂ ಬಿಡುಗಡೆಯಹುದೆನಲು; ಈ ಉ ಪಾಯಮಂ ಹೇಳಿ ಕೊಡಲು; ಮುಂದೆ ವಿಪ್ರ ಹೇಳಿದ ಕೃತ್ಯವೆಲ್ಲಾ ಆಗಲಾಗಿ; ಈ ರಾಯಂ ವಿಪ್ರಂಗೆ ಮೆಚ್ಚಿ, ಮುನ್ನಿನ ವೃತ್ತಾಂತಮಂ ಕೇಳಲಾ ರಾಯಂ ವಿಸ್ಮಿತನಾಗಿ, ನಿರಪರಾಧ ಬ್ರಾಹ್ಮಣಂ ಕೊಲಿಸಿದೆ ಎಂದು, ಅಕ್ಕಸಾಲೆಯಂ ಹಿಡಿತರಿಸಿ, ಶತ ಖಂಡವ ಮಾಡಿ, ಈ ಬ್ರಾಹ್ಮ ಣನಂ ಮನ್ನಿಸಿ, ಬೇಡಿದ ವಸ್ತುಗಳಂ ಕೊಟ್ಟು, ಕಳುಪಲು; ಆ ವಿಪ್ರಂ ತನ್ನ ಪುರಕಂ ಬಂದು, ಸುಖದಿಂದಿರ್ದನು.

ಎಲೇ ದಮನಕಾ, ಮೂರ್ಖನೇ, ನಿನ್ನನ್ನಲ್ಲದೆ ಬೇ ರೆ ಜನರಂ ಕೂಡ ಕೆಡಿಸುತ್ತಿದ್ಧಿ; ಅದೆಂತೆನೆ—

## ೨೭ನೇ ಕಥೆಯ ಮೊದಲಿನ ಭಾಗ.

### ತಂದೆಯು ದುಷ್ಟಪುತ್ರನ ಸಂಗಡ ಕೆಟ್ಟದ್ದು.

ಸುವರ್ಣಪುರವೆಂಬ ಪಟ್ಟಣದಲ್ಲು ಹಿರಣ್ಯವರ್ಮನೆಂಬ ವ್ಯವಹಾರಿ ಯು, ಆತಂಗೆ ಸುಬುದ್ಧಿಯೆಂಬ ಮಗನು; ಆ ಪುರದೊಳೋರ್ವ ವೇ ದಶರ್ಮನೆಂಬ ಬ್ರಾಹ್ಮಣಂಗೆ ದುಷ್ಟಬುದ್ಧಿಯೆಂಬ ಮಗನು; ಸುಬುದ್ಧಿ ಯೂ ದುಷ್ಟಬುದ್ಧಿಯೂ ಇವರಿಬ್ಬರು ಮಹಾ ಮಿತ್ರತ್ವಪ್ರಾಣಸಂಘಾ ತಿಗಳಾಗಿ, ಕೆಲವು ಕಾಲ ಸುಖದಿಂದಿರ್ದು, ಒಂದು ದಿನಂ ತಾವೀರ್ವ ರು ಯೋಚಿಸಿ ಕೊಂಡು, ನಾವಿಬ್ಬರೂ ನಾನಾ ದೇಶಂಗಳಂ ನೋಡ ಬೇಕೆಂದು, ನಿಶ್ಚೈಸಿ, ದಿಗ್ದೇಶಮಂ ಚರಿಸುತ್ತ, ಒಂದು ಮುಖರಾವತಿ ಯೆಂಬ ಪಟ್ಟಣದ ಮುಂದೆ ಉಳು ಕೊಂಡಿರಲು; ಒಂದು ದಿನಂ ಈ ಸು ಬುದ್ಧಿಯು ತನ್ನ ವಿಶ್ರಾಂತಿಯಿಂದೊಂದು ನದಿಯ ತೀರಂಗೊಂಡು ಹೋ

ಗುತ್ತಂ ಇರಲು; ಅಲ್ಲಿ ಏಳು ಕೊಪ್ಪರಿಗೆ ದ್ರವ್ಯಮಂ ಕಂಡು—ಈ ದುಷ್ಟಬುದ್ಧಿಯು ತನ್ನ ಸಂಗಡ ಬಂದನು, ಈತಂಗೆ ವಂಚನೆಯಂ ಮಾಡ ಬಾರದೆಂದು, ಮಹಾ ಕರುಣದಿಂದೀತನಂ ಕರದೊಯಿದು, ಏಳು ಕೊಪ್ಪರಿಗೆ ದ್ರವ್ಯಮಂ ತೋರಿ, ಇದಂ ನಾವು ಇಬ್ಬರೂ ಸರಿಯಾಗಿ ತೆಗದು ಕೊಂಬೆವು ಎಂದು, ಹೇಳಿ—ಇದಂ ಈ ವೇಳ್ಯಯದಲ್ಲು ಕೊಂಡು ಹೋಹರೆ ಸಮನಲ್ಲಾ, ಮತ್ತೊಂದು ದಿನಂ ಬಂದು, ಕೊಂಡು ಹೋಹೆವು ಎಂದು, ಅದಕ್ಕೆಲ್ಲಾ ತಮ್ಮ ಕುರುಹಂ ಮಾಡಿ, ನಿಕ್ಷೇಪಿಸಿ, ತಾವೀರ್ವರು ತಮ್ಮ ಪುರಕ್ಕಂ ಬಂದು, ಸುಖದಿಂದಿರಲು; ಈ ಬ್ರಾಹ್ಮಣನ ಮಗಂ ಬಂದು, ರಾತ್ರೆಯಲ್ಲು ಹೋಗಿ, ಆ ನಿಕ್ಷೇಪಮಂ ಕೊಂಡು ಬಂದು, ತಮ್ಮನೆಯಲ್ಲು ಹಾಕಿ ಕೊಂಡು, ಮಹಾ ಗರ್ವದಿಂ ಸುಬುದ್ಧಿಯಂ ಬಗೆಯದೆ ಇರಲು; ಸುಬುದ್ಧಿಯು ವಿಸ್ಮಿತನಾಗಿ—ಈ ದುಷ್ಟ ಬುದ್ಧಿಯೂ ನಾವೂ ಮಹಾ ಸಂಘಾತಿಗಳು; ಇವಂ ನನ್ನಂ ಬಗೆಯದೆ, ಮಹಾ ಗರ್ವದಿಂದಿದ್ದಾನೆ ಎಂದು, ನಿಶ್ವೈಸಿ, ಆ ದುಷ್ಟಬುದ್ಧಿಯ ಬಳಿಗಂ ಬಂದು—ನೀನು ಭೇದವಾಗಿ ಇದ್ದುದಿಲ್ಲಾ; ಆ ನಿಕ್ಷೇಪವಂ ತಂದಿ, ಒಳ್ಳೆಯ ಕಾರ್ಯವಾಯಿತು! ನಿನ್ನ ಪಾಲಂ ನೀನು ತೆಗದು ಕೊಂಡು, ನನ್ನ ಪಾಲಂ ನನಗೆ ಕೊಡು! ಎನಲು; ನಿನಗೆಲ್ಲಿಯ ಪಾಲು? ನೀನೇ ನಿಕ್ಷೇಪವಂ ಕಂಡಿ? ನಾನು ಕಂಡಂಥಾ ನಿಕ್ಷೇಪವನ್ನು ನಾನು ತಂದೆನು; ನಿನಗೇನು ಕಾರಣ? ಹೋಗು! ಎನಲು; ಒಬ್ಬರಿಗೊಬ್ಬರು ವಾಗ್ವಾದವಂ ಮಾಡಿ ಕೊಂಡು, ನಾವಿಬ್ಬರೂ ನ್ಯಾಯಮಂ ಕೇಳುವಾ! ಬಾ! ಎಂದು, ಆ ಪುರದ ರಾಯನ ಬಳಿಗಂ ಬಂದು, ತಮ್ಮ ಪೂರ್ವ ವೃತ್ತಾಂತಮಂ ಹೇಳಿ—ನಾನು ಕಂಡಂಥಾ ನಿಕ್ಷೇಪವನ್ನು ನನಗೆ ಕೊಡದೆ, ಈತನು ತಾನೇ ತೆಗದು ಕೊಂಡು ಇದ್ಧಾನೆ ಎಂದು, ಹೇಳಲು; ಆ ದುಷ್ಟಬುದ್ಧಿಯು—ಈತನು ಕಂಡದಿಲ್ಲ; ನಾನೇ ಕಂಡೆನು, ನಾನೇ ತಂದೆನು! ಎನಲಾಗಿ; ಅದಕ್ಕೆ ಸಾಕ್ಷಿಗಳುಂಟೇ? ಎಂದು, ಕೇಳಲು; ಅಲ್ಲಿಯ ವೃಕ್ಷಗಳ ಬಾಯಿಯ ನುಡಿಸಿ ಕೊಡುವೆನೆನಲು; ಆ ರಾಯಂ ವಿಸ್ಮಯಂ ಬಟ್ಟು, ಮಹಾ ಚೋದ್ಯಂ ಬಟ್ಟು, ನಾಳೆ ಸಾಕ್ಷಿಯ ನುಡಿಸಿ ಕೊಡು! ಎಂದು, ಅವರ ಕಳುಪಲು; ಆ ದುಷ್ಟ

ಬುದ್ಧಿಯು ತನ್ನ ಗೃಹಕ್ಕೆ ಬಂದು, ತಂದೆಯ ಕೂಡೆ ಈ ಸ್ಥಿತಿಯನ್ನೇ ಹೇಳಿ—ನನ್ನ ನ್ಯಾಯ ಗೆಲ ಬೇಕು; ಅದು ಕಾರಣ ನಿನ್ನನ್ನು ಕೊಂಡು ಹೋಗಿ, ಅಲ್ಲಿಯ ಮರನ ಹೊಟ್ಟೆಯಲ್ಲಿ ಇರಿಸಿ, ನಾಳೆ ಆ ಅರಸು ಸಹಾ ನಾವು ಎಲ್ಲರು ನ್ಯಾಯಕ್ಕೆ ಬಂದು, ನಿನ್ನಂ ಅಡಗಿಸಿರ್ದ ಮರನಂ ಅರ್ಚಿಸಿ, ಆರು ಕಂಡರು? ಎಂದು, ಕೇಳಲು; ಈ ಬ್ರಾಹ್ಮಣನ ಮಗ ಕಂಡನಲ್ಲದೆ ಸೆಟ್ಟಿಯ ಮಗ ಕಂಡದ್ದು ಇಲ್ಲಾ, ಆತಂಗೆ ಕಾರಣವಿಲ್ಲಾ ಎಂದು ನುಡಿ! ಎನಲು; ನನ್ನ ನ್ಯಾಯ ಗೆದ್ದು, ಅಪರಿಮಿತ ದ್ರವ್ಯ ಶೇರುವದು; ಅದು ಕಾರಣ ನೀನು ಈ ಪ್ರಕಾರದಿಂ ನುಡಿ! ಎನಲು; ಇಂಥಾ ಅನ್ಯಾಯ ಉಂಟೇ? ಆ ಸೌಭಾಗ್ಯನಿಂದ ಇಂದು ಪರಿಯಂತ ಜೀವಿಸಿ ಬದುಕಿ ಇದ್ದೆವು, ಮೇಲೆ ಇದು ಆತ ಕಂಡಂಥಾ ದ್ರವ್ಯವು; ಅದರಿಂದ ಅರ್ಧವನಾತಂಗೆ ಕೊಟ್ಟು, ನಿನ್ನ ಅರ್ಧವೇ ನೀನು ತೆಗದು ಕೊಂಡು, ಸುಖದಲ್ಲಿ ಇರ ಬಾರದೇ? ಎಂದು, ಬುದ್ಧಿಯಂ ಹೇಳೆ; ಅವಂ ಕೇಳದೆ ಇರಲು; ಅದರಿಂದ ನೀನು ಜೈಸಲರಿಯೆ ಎಂದು, ಹೇಳಿ, ಮತ್ತಿಂತೆಂದನು—

## ೨೮ ನೇ ಕಥೆ.

### ಮರಿಗಳು ಬಕಪಕ್ಷಿಯೊಂದಿಗೆ ಕೆಟ್ಟದ್ದು.

ಮುನಿವಾಸಿಯೆಂಬ ವನಾಂತರದಲ್ಲು ಮಹಾ ದೊಡ್ಡಿತಾದ ವಟವೃಕ್ಷ ಉಂಟು; ಅದರ ಮೇಲೆ ಒಂದು ಬಕನ ಹಕ್ಕಿಯು ಗೂಡು ಮಾಡಿ ಕೊಂಡು, ತನ್ನ ಸತಿಯಂ ಕೂಡಿ ಕೊಂಡು, ಸುಖದಿಂ ಕೆಲವು ಕಾಲ ಇರಲು; ಆ ಮರನಡಿಯಲ್ಲು ಒಂದು ಮಹಾ ಘಟಸರ್ಪ ಹುತ್ತವನಿಕ್ಕಿ ಕೊಂಡು ಇರಲು; ಆ ಬಕನ ಹಕ್ಕಿಯೂ ಈ ಸರ್ಪನೂ ಮಹಾ ಮಿತ್ರತ್ವದಿಂದಿರಲು; ಒಂದು ದಿನಂ ಈ ಬಕನ ಹಕ್ಕಿಯು ಆಹಾರಾರ್ಥವಾಗಿ ವನಾಂತರಕ್ಕೆ ಹೋಗಲು; ಒಂದು ಮಹಾ ಪ್ರಳಯವಾದ ಘಾಳಿ ಬೀಸಲು; ಈ ಬಕನ ಗೂಡೆಲ್ಲಾ ಮುರಿದು, ತತ್ತಿಗಳೆಲ್ಲಾ ಉದುರಿ, ನೆಲಕ್ಕೆ ಬೀಳಲು; ಈ ಸರ್ಪನು ಬಕನ ತತ್ತಿಗಳೆಂದರಿಯದೆ, ಅಜ್ಞಾನದಿಂ ಭಕ್ಷಿಸಲು; ಈ ಬಕನು, ತನ್ನ ತತ್ತಿಗಳಂ ತಿನ್ನ ಬಹುದೇ? ಎಂದು, ಮ

ಹಾ ಕೋಪಿಸಲು; ಅರಿಯದೆ ಭಕ್ಷಿಸಿದೆನೆಂದು, ನಾನಾ ಶಪಥವ ಮಾಡಿ, ಇದಂ ನನ್ನ ನೋಡಿ ಮರೆ! ಎಂದು, ಮಹಾ ದೈನ್ಯದಿಂ ಪ್ರಾರ್ಥಿಸಿ, ಬೇಡಿ ಕೊಳ್ಳಲು; ಆ ಬಕಂ ತನ್ನ ಮನಸ್ಸಿನ ದ್ವೇಷಮಂ ಬಿಡದೆ, ಕೊಲ್ಲಬೇಕೆಂದು, ಮುಂಗುಲಿಯೊಡನೆ ಸ್ನೇಹಮಂ ಮಾಡಿ, ಆ ಮುಂಗುಲಿಯ ಕೈಯಿಂದ ಸರ್ಪನಂ ಕೊಲಿಸಲು; ಮುಂದೆ ಆ ಮುಂಗುಲಿಯು ಆ ಹುತ್ತದಲ್ಲು ಮನೆಯಂ ಮಾಡಿ ಕೊಂಡು, ಆಹಾರ ಇಲ್ಲದೆ ಇರಲು; ದಿನಂಪ್ರತಿಯು ಈ ಬಕನ ವಂಶಮಂ ತಿಂದು, ಸರಿ ಮಾಡಿ, ತುದಿಯ ಕಾಲಕ್ಕೆ ಆ ಬಕನಂ ಮುರಿದು ಭಕ್ಷಿಸಿತು.

## ೨೭ನೇ ಕಥೆಯ ಎರಡನೇ ಭಾಗ.

ಅದು ಕಾರಣ ಇನ್ನು ವರ್ಮವ ಮಾಡುವ ಇಂಥಾ ಬುದ್ಧಿಯಂ ಬಿಟ್ಟು, ಲಾಭವನ್ನಲ್ಲದೆ ನಷ್ಟಮಂ ಬಗದು, ಮುಂದಿನಂತೆ ಸ್ನೇಹದಲ್ಲು ಇರು! ಎಂದು, ಹೇಳಿ, ಮತ್ತಿಂತೆಂದಂ—

## ೨೮ನೇ ಕಥೆ.

ಅಸತ್ಯವಂತ ವ್ಯವಹಾರಿಗೆ ಕೇಡು ಬಂದದ್ದು.

ಶ್ರುತಕೀರ್ತಿಯೆಂಬ ಪಟ್ಟಣದಲ್ಲು ಧರ್ಮಪಾಲನೆಂಬ ವ್ಯವಹಾರಿಯು ಸಹಸ್ರಸಂಖ್ಯೆ ಎಂಬ ಎತ್ತಿನ ಮೇಲೆ ಕಬ್ಬುಣಂ ಹೇರಿಸಿ ಕೊಂಡು, ಸಮುದ್ರತೀರದಲ್ಲು ಮಧುರೆಯೆಂಬ ಪಟ್ಟಣದಲ್ಲು ತಾನು ತಂದಂಥಾ ಬೆಹಾರಮಂ ಮಾರದೆ ಇರಲು; ಮಹಾ ವ್ಯಾಕುಲಂಗೊಂಡು, ಈ ವೇಳ್ಯಯದಲ್ಲು ಮಾರಿದರೆ ನಷ್ಟವಾದೀತೆಂದು, ಪುರದೊಳಿರ್ಪ ಕೃತವರ್ಮನೆಂಬ ಮಹಾ ದೊಡ್ಡ ಸೆಟ್ಟಿಯ ಮನೆಗೆ ಹೋಗಿ— ಈ ವೇಳೆಯಲ್ಲು ಕಬ್ಬುಣ ಅತಿ ಅಗ್ಗವಾಗಿ ಇದ್ದೀತು, ಮಾರದು ಎಂದು, ಈ ಕಬ್ಬುಣದ ಹೇರುಗಳನ್ನು ಈ ಹರದನ ಮನೆಯಲ್ಲು ಇರಿಸಿ, ತಾನು ತನ್ನ ಪುರಕ್ಕೆ ಹೋಗಲು; ಇತ್ತಲೀ ಕೃತವರ್ಮನೆಂಬ ಸೆಟ್ಟಿಯು—ಇಲ್ಲಿ ಕಬ್ಬುಣ ಪ್ರಿಯವಾಗಿ ಮಾರುತ್ತಿರಲು; ಈ ಕಬ್ಬುಣದ ಹೇರುಗಳಂ ತೆಗದು ಕೊಂಡು, ಮಾರಿ, ಮುಂದೆ ಕಬ್ಬುಣದ ವ್ಯವಹಾ

ರಿಯು ಬಂದ ಕಾಲಕ್ಕೆ, ನಿನ್ನ ಕಬ್ಬುಣವೆಲ್ಲಾ ಇಲಿಗಳು ತಿಂದವು ಎಂದು, ಹೇಳುವೆನೆಂದು, ತನ್ನ ಮನಸಿನಲಿ ಯೋಚಿಸಿ ಕೊಂಡು, ಮಾಡಲು; ಕೆಲವು ಕಾಲಕ್ಕೆ ಈ ಹರದಂ ಬರಲು; ಈತನಂ ವಿನಯದಿಂದುಪಚರಿಸಿ, ಮಹಾ ಸ್ನೇಹದಿಂ ಕೂಡಿ ಕೊಂಡಿರಲು, ಒಂದು ದಿನಂ ಈ ಧರ್ಮಪಾಲನೆಂಬ ಹರದನು, ನನ್ನ ಕಬ್ಬುಣದ ಹೇರು ಹ್ಯಾಗೆ ಇದ್ದಾವು? ಎಂದು, ಕೇಳಲು; ಅವನ್ನೆಲ್ಲಾ ಇಲಿಗಳು ತಿಂದವೆನಲು; ಈತಂ ಬೆರಗಾಗಿ, ವಿಸ್ಮಯಂ ಬಟ್ಟು, ಈತಂ ಮಹಾ ಧೂರ್ತನೆಂದು, ಈತನೊಡನೆ ಹೋರ ಬಾರದೆಂದು, ಒಂದು ಉಪಾಯಾಂತರದಿಂ ಕಾರ್ಯ ಕೊಳ ಬೇಕೆಂದು, ನಿಶ್ಚಯಿಸಿ—ನಮ್ಮಲ್ಲಿಯೇ ಇಲಿಗಳು ತಿಂದಾವೆಂದು ನಿಮ್ಮಲ್ಲಿ ಇರಿಸಿದ್ದರೆ, ಇಲ್ಲಿಯೂ ಇಲಿಗಳು ತಿಂದವು, ಅದು ನಮ್ಮ ಗ್ರಹಸ್ಥಿತಿ, ನೀವೇನ ಮಾಡುವಿರಿ? ಎಂದು, ಸಂತೈಸಿ ಕೊಂಡು, ಮೊದಲಿನಿಂದ ವೆಗ್ಗಳ ಸ್ನೇಹದಿಂ ಕೆಲವು ದಿವಸಂ ಇರ್ದು, ಎಂದಿನಂತೆ ನದಿಗಂ ಹೋಗುತ್ತಿರಲು; ಆ ಹರದನ ಮಗಳು ಈತನ ಸಂಗಡ ಬರಲು; ಆ ಹತ್ತು ವರುಷದ ಮಗಳ ಕೂಡಿ ಕೊಂಡು, ಗಂಗೆಗೆ ಹೋಗಿ, ತಿರಿಗಿ ಬರುತ್ತಂ, ತನ್ನ ಭೃತ್ಯನ ಕರದು, ಈ ಮಗಳನ್ನು ಜತನ ಮಾಡಿ ಕೊಂಡು ಇರು ಎಂದು, ಹೇಳಿ, ತಾನು ಮನೆಗಂ ಬರಲು; ಈ ಹರದಂ, ತನ್ನ ಮಗಳು ಎಲ್ಲಿ ಇದ್ದಾಳೆ? ಎಂದು, ಕೇಳಲು; ನಾವು ಗಂಗೆಗೆ ಹೋಗಿ ಬರುತ್ತಂ, ಒಂದು ಹದ್ದು ಕಚ್ಚಿ ಕೊಂಡು ಹೋಯಿತು; ನಾವು ಕಲ್ಲುಗುಂಡುಗಳಿಂದ ಇಟ್ಟರೂ ಕೈಕೊಳ್ಳದೆ, ಕೊಂಡು ಹೋಯಿತೆನಲು; ಆ ಹರದಂ ಕೋಪಿಸಿ ಕೊಂಡು, ಬಾಯಿಗೆ ಬಂದ ಹಾಗೆ ಬೈದು, ಶೆರಗ ಹಿಡು ಕೊಂಡು, ಆ ಪುರದ ರಾಯನ ಬಳಿಗಂ ಕರದೊಯಿದು—ಎಲೇ ಸ್ವಾಮಿ, ಈತಂ ನನ್ನ ಮಗಳಂ ಕರದೊಯಿದು, ಹತ್ತು ವರುಷದ ಕನ್ನಿಕೆಯಂ ಹದ್ದು ಕಚ್ಚಿ ಕೊಂಡು ಹೋಯಿತು ಎನುತಿದ್ದಾನೆ; ಇದು ವಿಚಾರ ಮಾಡ ಬೇಕೆಂದು, ಬಿನ್ನೈಸಲಾ ರಾಯಂ ಬೆರಗಾಗಿ, ಆ ಹರದನಂ ಕೇಳಲು; ಸರ್ವಥಾ ಹದ್ದು ಕಚ್ಚಿ ಕೊಂಡು ಹೋಯಿತು! ಎನಲು; ಇಂಥಾದುಂಟೇ? ಈತ ಮಹಾ ದುರ್ಜನನು ಎನಲು; ಸ್ವಾಮಿ, ನಾನೇ ಮಹಾ ದುರ್ಜನನು, ಈತ ಮಹಾ ಸಜನನು, ಸಾವಿರ ಹೇರು ಕಬ್ಬು

ಣವು ಇಲಿಗಳು ತಿಂದವೆಂದು ಹೇಳಿ ಕೊಂಡಿದ್ದಾನೆ! ಎನಲು; ಇದೇನೆಂಬ ಪರಿಯೆನಲು; ಆ ಹರದಂ ತಮ್ಮ ಪೂರ್ವ ವೃತ್ತಾಂತವನುಂ ಹೇಳಲು; ಆ ರಾಯಂ ಬೆರಗಾಗಿ, ಆ ಹರದನ ಧನವಂ ಕೊಡಿಸಿ, ತನ್ನ ಊರ ಹರದಂಗೆ ಆಜ್ಞೆಯಂ ಮಾಡಿಸಿ, ಈ ಹರದಂಗೆ ಮೆಚ್ಚಿ, ಸಪ್ತಾಂಗವಮಂ ಕೊಟ್ಟು, ಮನ್ನಿಸಿ, ಕಳುಹಿದನು.

## ೨೭ನೇ ಕಥೆಯ ಮೂರನೇ ಭಾಗ.

ಅದು ಕಾರಣಂ ಸತ್ಯವಂತರಾದವರ ಕೂಡೆ ಅಸತ್ಯಮಂ ಮಾಡಲು, ಅವರು ತಾವೇ ಕೆಡುವರು; ಅದು ಕಾರಣದಿಂ ಇಂಥಾ ಅಪ್ರಬುದ್ಧತನ ಮಾಡ ಬೇಡ, ಸುಬುದ್ಧಿಯಿಂದಿರು ಎಂದು, ಹೇಳಲು; ಆ ತಂದೆಯಂ ಝುಂಕಿಸಿ ಕೊಂಡು—ನಾನು ಹೇಳಿದ ಹಾಗೆ ಇದ್ದರೆ ಇರು, ಇಲ್ಲದಿದ್ದರೆ ನಿನ್ನಂ ಕೊಲುವೆನೆನಲು; ಇವಂ ಮಹಾ ಮೂರ್ಖನು, ಇವ ಹೇಳಿದ ಹಾಗೆ ಇರ ಬೇಕೆಂದು, ಆ ಮಗನ ಸಂಗಡಲೇ ವೃಕ್ಷದೆಡೆಗಂ ಬಂದು, ಆ ಮರನ ಹೊಟ್ಟೆಯೊಳಗೆ ಹೊಕ್ಕಿರಲು; ಆ ರಾಯಂ ಮರುದಿವಸಂ, ಈ ಚೋದ್ಯಮಂ ನೋಡ ಬೇಕೆಂದು, ಸಮಸ್ತ ಪರಿಜನ ಪುರಜನ ಸಹಿತಂ ವೆರಸಿ, ಈರ್ವರು ನ್ಯಾಯದವರಂ ಕೂಡಿ ಕೊಂಡು, ಆ ವೃಕ್ಷದೆಡೆಗಂ ಬಂದು, ಅರ್ಚನೆ ಮಾಡಿ—ಎಲೇ ವೃಕ್ಷರಾಜಾ, ನಿನಗೆ ಪಕ್ಷ ಪರಪಕ್ಷ ಇಲ್ಲದೆ ಇವರೀರ್ವರಿಗೂ ಸರಿ ಧರ್ಮಾಧರ್ಮದಲ್ಲಿ ನುಡಿ! ಎನಲು; ಸರ್ವಥಾ ಬ್ರಾಹ್ಮಣನ ಮಗ ಕಂಡದಲ್ಲದೆ ಹರದನ ಮಗಂ ಕಂಡದಿಲ್ಲಾ! ಎನಲು; ಆ ರಾಯಂ ಅಲ್ಲಿ ನೆರದಿರ್ದ ಸಭೆ ಸಹಿತ ವಿಸ್ಮಯಂ ಬಟ್ಟು, ಬೆರಗಾಗಿ, ಈ ಸುಬುದ್ಧಿಯಂ ಕರದು—ಇದೇನೈ? ನಿನ್ನ ನ್ಯಾಯ ಸೋತಿತು ಎನಲು; ಈ ಕಾಲಕ್ಕಿನ್ನೆಲ್ಲಿಯ ನ್ಯಾಯಧರ್ಮವಿದ್ದೀತು? ಎಂದು, ಈ ಮರನು ಹುಸಿಯ ನುಡಿಯಿತು! ಎಂದು, ಮಹಾ ಕೋಪದಿಂದ ಮರಕ್ಕೆ ಕಿಚ್ಚು ಹಾಕಲು; ಅಲ್ಲಿ ಇದ್ದ ಬ್ರಾಹ್ಮಣಂ ಹೊಗೆ ತಾಳಲಾರದೆ, ಹೊರಟು ಬಂದು, ಯಥಾರ್ಥಂ ತಿಳುಹಿ, ಪಂಚತ್ವವನೈದಲಾಗಿ; ಈ ರಾಯಂ ನೆರದಿರ್ದ ಸಭೆಯೆಲ್ಲಾ ಚೋದ್ಯಂ ಬಟ್ಟು, ಮಹಾ ಕೋಪದಿಂ ದುಷ್ಟಬುದ್ಧಿಯ ಬಾಯ್ಯಂ ಹೊಯಿಸಿ,

ತೆಗದು ಕೊಂಡಿರ್ದ ಸಮಸ್ತ ದ್ರವ್ಯಮಂ ತರಿಸಿ, ಈ ಸುಬುದ್ಧಿಗೆ ಕೊಡಿಸಿ, ಆ ಮರಕ್ಕೆ ಉರುಲಂ ಕಟ್ಟಿ, ದುಷ್ಟಬುದ್ಧಿಗಿಡಿಸಿ ಹೋದರು.

ಅದು ಕಾರಣಂ ಲಾಭ ನಷ್ಟಂಗಳಂ ವಿಚಾರಿಸಿ ಆವದೊಂದು ಕಾರ್ಯವಂ ಮಾಡ ಬೇಕೆಂದು, ಕರಟಕಂ ಹೇಳಲಾಗಿ; ಸಂಜೀವಕಂಗೆಯೂ ಸಿಂಹರಾಜಂಗೆಯೂ ಆದ ಮಹಾ ಯುದ್ಧದಲ್ಲು ಸಿಂಹನು ಆ ಸಂಜೀವಕನಂ ಕೊಂದು ಕೆಡಹಲಾಗಿ; ಆ ಜಂಬುಕಂಗಳು ಸಿಂಹರಾಜ ಸಹಾ ಅದಂ ಭಕ್ಷಿಸಿ, ಎಂದಿನಂತೆ ತಮ್ಮ ಪ್ರಧಾನಿಕೆಯಂ ಮಾಡಿ ಕೊಂಡು, ಸುಖದಲ್ಲು ಇರ್ದರು.

---

# ೨ನೇ ತಂತ್ರ.

## ವಾಯಸ ಮೂಷಿಕ ಎರಳೆ ಕೂರ್ಮಗಳು ಮಿತ್ರರಾದದ್ದೆಂಬ ಮಿತ್ರಸಂಪ್ರಾಪ್ತಿ.

### 1. ಆ ನಾಲ್ವರು ಗೆಳೆಯರಾದದ್ದು.

ಮಹಿಳಾಪುರವೆಂಬ ಪಟ್ಟಣದ ಸಮೀಪದಲ್ಲು ಕನಕಾಚಲವೆಂಬ ಮಹಾ ಪರ್ವತ ಉಂಟು. ಆ ಪರ್ವತದ ತಪ್ಪಲಲ್ಲು ಒಂದು ವಟವೃಕ್ಷದ ಮೇಲೆ ಮೇಘವರ್ಣನೆಂಬ ವಾಯಸರಾಜಂ ತನ್ನ ಕುಲಕೋಟಿಯಂ ಕೂಡಿ ಕೊಂಡು, ಸುಖದಲ್ಲು ಇರಲು; ಆ ಪರ್ವತದ ಕೋಡುಗಲ್ಲಿನ ಗುಹೆಯೊಳಗೆಯೇ ಚಿತ್ರಗ್ರೀವ ಎಂಬ ಪಾರಿವಾಣದ ಹಕ್ಕಿಯು ಪ್ರಜೆ ಪರಿವಾರವಂ ಕೂಡಿ ಕೊಂಡು, ಸುಖದಿಂದಿರಲು;

ಆ ವಾಯುಸನು ತನ್ನ ಆಹಾರ ನಿಮಿತ್ತವಾಗಿ ಆ ಪಟ್ಟಣದೊಳಗೆ ಹೋಗುತ್ತಿರಲು; ನಡುದಾರಿಯೊಳಗೆ ಒಬ್ಬ ನಿಂದಕನೆಂಬ ಬೇಂಟೆಗಾರನು ನಾನಾ ತರದ ಬಲೆಗಳಂ ಕೊಂಡು ಹೋಗುತ್ತಂ ಇರಲು; ಆ ವಾಯುಸರಾಜಂ ತನ್ನೊಳು ಆಲೋಚಿಸಿ ಕೊಂಡು—ತಾನು ಆಹಾರಾರ್ಥವಾಗಿ ಊರೊಳಗೆ ಹೋಗಲಾಗಿ, ಈ ಬೇಂಟೆಗಾರನು ತನ್ನ ವೃಕ್ಷದ ತಡಿಯಲ್ಲು ಬಲೆಯಂನಿಕ್ಕಿ ಮೇವಂನಿಕ್ಕಲಾಗಿ, ದುರಾಶೆಯಲ್ಲಿ ಬಂದು ತನ್ನ ಪ್ರಜೆ ಪರಿವಾರ ಸಹಾ ಕೂಡಿ ಕೊಂಡು ಬಲೆಯೊಳಗೆ ಶಿಕ್ಕಿ ಕೊಂಡಾವು; ಈ ವೇಳೆಯಲ್ಲು ತಾನು ಆಹಾರಕ್ಕೆ ಹೋಹ ಕಾರ್ಯವಲ್ಲೆಂದು, ತಿರುಗಿ, ತನ್ನ ಮರಕಂ ಬಂದು, ಈ ಸ್ಥಿತಿಯನ್ನು ತನ್ನ ಬಳಗಕ್ಕಂ ಸಕಲ ಪಕ್ಷಿಗಳಿಗೆ ಸಹ ಹೇಳಿ, ಕಟ್ಟು ಮಾಡಿ ಇರಲು; ಆ ಕ್ಷಣದಲ್ಲಿ ಆ ಬೇಂಟೆಗಾರಂ ಬಂದು, ಬಲೆಯಂನೊಡ್ಡಿ, ಮೇವಂ ಹಾಕಿ, ತಾನು ಮರೆಯಲ್ಲು ಕುಳುತಿರಲು; ಚಿತ್ರಗ್ರೀವನೆಂಬ ಆ ಪಾರಿವಾಳಂ ಬಂದು, ತನ್ನ ಪ್ರಜೆ ಪರಿವಾರ ಸಹಾ ಕೂಡಿ ಆಹಾರಕ್ಕಂ ಹೋಗುತ್ತಾ, ಈ ಬಲೆಯಂ ಕಾಣದೆ, ಅದರೊಳಗೆ ಇದ್ದ ಮೇವಂ ಕಂಡು, ಭರದಿಂದ ಇರಲಾಗಿ; ಆ ಬಲೆಯೊಳಗೆ ಶಿಕ್ಕಿ, ಕಂಗೆಟ್ಟು, ಇದಕ್ಕೇನು ಉಪಾಯವೆಂದು, ತಮ್ಮೊಳು ಆಲೋಚಿಸಿ ಕೊಂಡು—ನಾವು ಒಬ್ಬರಾಗಿ ಹೋಗಲಾಗದು; ತಾವು ಎಲ್ಲರು ಈ ಬಲೆಯನ್ನೇ ಹಾರಿಸಿ ಕೊಂಡು ಹೋಗ ಬೇಕು ಎಂದು, ನಿಶ್ಚಯಿಸಿ, ಆ ಮರಿಯಾದೆಯಲ್ಲು ಬಲೆಯಂ ಕಚ್ಚಿ ಕೊಂಡು, ಯೋಜನಾಂತರಕ್ಕೆ ಏರಿಸಿ ಕೊಂಡು ಹೋಗಲು;

ಇತ್ತಲೀ ಬೇಂಟೆಗಾರನು ವಿಸ್ಮಯಂಬಟ್ಟು, ಇಂತೆಂದಾ—ಬಹಂಥಾದ್ದು ಬಂದೀತು, ಹೋಹಂಥಾದ್ದು ಹೋಹುದು; ಅದೆಂತೆನೆ, ತೆಂಗಿನ ಕಾಯಿಯೊಳಗೆ ಉದಕವನಾರೂತುಂಬಿದವರಿಲ್ಲಾ, ಆನೆ ನುಂಗಿದ ಬೇಲದ ಹಣ್ಣಿನೊಳಗಣ ತಿರುಳನಾರೂ ತೆಗದವರಿಲ್ಲಾ ಎಂದು, ಈ ಬೇಂಟೆಗಾರನು ಮಹಾ ಧೈರ್ಯವ ಮಾಡಿ ಕೊಂಡು, ತನ್ನ ಪುರಕ್ಕೆ ಹೋದನು. ಇತ್ತಲೀ ಬಲೆಗಳಂ ಕಚ್ಚಿ ಕೊಂಡು ಹೋದ ಪಕ್ಷಿಗಳಂ ಮೇಘವರ್ಮನೆಂಬ ವಾಯಸಂ ಕಂಡು—ಆ ಪಕ್ಷಿಗಳು ಮಹಾ ಬಲೆಗಳಂ ಅತಿರಿಕ್ತ ಬುದ್ಧಿಯಿಂದ ಕಚ್ಚಿ ಕೊಂಡು ಹೋದವು; ತಾವು ಇನ್ನು ಯಾವ ಬಗೆಯಲ್ಲಿ ಬಿಡಿಸಿ ಕೊಂಬುದಂ ನೋಡ ಬೇಕೆಂದು, ಈ ವಾಯಸಂ ಹಿಂದುಗೊಂಡೇ ಬರಲು; ಚಿತ್ರಗ್ರೀವನೆಂಬ ಪಕ್ಷಿಯು ಮಂದರಗಿರಿ ಇಪ್ಪಲ್ಲಿಗಂ ಬಂದು, ಅಲ್ಲಿ ತನ್ನ ಪ್ರಾಣಸಖನಾದ ಹಿರಣ್ಯಕನೆಂಬ ಮೂಷಿಕರಾಜನ ಬಳಿಗಂ ಬಂದು, ತಮ್ಮ ಬಂಧನಗಳಂ ಬಿಡಿಸಿ ಕೊಡು! ಎನಲು; ಆ ಮೂಷಿಕಂ ಈ ಬಲೆಗಳೆಲ್ಲಾ ಕಡಿದು, ಈ ಪಕ್ಷಿಗಳ ಬಂಧನವನ್ನು ಬಿಡಿಸಿ, ಈ ಚಿತ್ರಗ್ರೀವನಂ ಇರಿಸಿ ಕೊಂಡು, ಮಹಾ ಸನ್ಮಾನವಂ ಮಾಡಿ—ನೀನು ಮಹಾ ಬುದ್ಧಿವಂತನು; ಈ ಬಲೆಯೊಳಗೆ ಶಿಕ್ಕುವರೆ ಕಾರಣವೇನೆನಲು, ಚಿತ್ರಗ್ರೀವನಿಂತೆಂದುದು—ರಾಮರಾಯಗೆ ಸೀತಾವಿಯೋಗವಾಯಿತು; ಶುಕವೀರನೆಂಬ ರಾಯಗೆ ಕಳ್ಳನೆಂದು ತಲೆಯು ಹೊಯಿದು, ಕಾಂಚೀಪಟ್ಟಣದ ಆಲದ ಮರನ ತುದಿಗೆ ಕಟ್ಟಿದರು; ವಿಕ್ರಮಾದಿತ್ಯರಾಯನು ತನ್ನ ಪ್ರಾಣಸಂಕಷ್ಟದಲ್ಲು, ಕಾಗೆಯ ಮಸೆಯಂ ತಿಂದರೆ ಬದುಕು

ವೆನೆಂದು, ಕಕ್ಕುಲಿತೆ ಬಟ್ಟನು; ಪಾಂಡವರು ವನವಾಸ ವನ್ನೇ ತಿರುಗಿದರು; ಹರಿಶ್ಚಂದ್ರರಾಯನು ಚಾಂಡಾಲರಿ ಗೆ ಕಿಂಕರನಾದನು; ಅದು ಕಾರಣ ಇಂಥಾ ದೊಡ್ಡವರು ದೇವಾಧೀನತ್ವದಿಂದ ಇಂಥಾ ಅವಸ್ಥೆಗೆ ಒಳಗಾದರು; ಆ ರಾದರೂ ದೇವಾಜ್ಞೆಯಂ ಮೀರ ಕೂಡದು ಎಂದು, ಹೇ ಳಲು; ಆ ಮೂಷಿಕರಾಜನು, ಜಿಹ್ವಾಸ್ವಾದಕ್ಕೆ ಲಂಪಟ ರಾಗಿ ಕೆಟ್ಟವರುಂಟು! ಎಂದು, ಹೇಳಲು; ಅದೆಂತೆನೆ— ಜಿಹ್ವೆಯ ಪ್ರಮಾಣ ತಿಳಿದು ಇರ ಬೇಕು; ಮಾತನಾಡು ವಲ್ಲಿ, ವ್ಯವಹಾರದಲ್ಲಿ ಪರಾಂಬರಿಕೆ ಇರ ಬೇಕು; ಅದೆಂ ತೆನೆ—

## ೧ನೇ ಕಥೆ.

### ಅತ್ಯಾಶೆಯಿಂದ ಇಲಿ ಕೆಟ್ಟದ್ದು.

ಹಿರಣ್ಯಪುರವೆಂಬ ಪಟ್ಟಣದಲ್ಲು ಹಿರಣ್ಯವರ್ಮನೆಂಬ ರಾಯಂ ಸುಖದಿಂದ ರಾಜ್ಯವನ್ನಾಳುತ್ತಾ ಇರಲು; ಒಂದಾನೊಂದು ದಿವಸ ಆ ರಾಯಂ ಹೊರಟು, ಸವಾರಿಯಂ ತೆರಳಿ ಬರಲು; ಕಳಿಂಗದೇಶದ ಲ್ಲು ಕಾರ್ಕೋಟಕನೆಂಬ ಒಬ್ಬ ಗಾರಡಿಗಂ ಬಂದು, ರಾಯನ ಮುಂದೆ ನಾನಾ ಪ್ರಕಾರ ಸರ್ಪಗಳನ್ನಾಡಿಸಿ, ಇಂದ್ರಜಾಲ ಮಹೇಂದ್ರಜಾಲ ಮುಂತಾದ ನಾನಾ ವಿದ್ಯಂಗಳಂ ತೋರಿಸಲು; ಆ ರಾಯಂ ಬಹು ಸಂತೋಷದಿಂದ ಈತಗೆ ಮೆಚ್ಚಿ, ಆ ಗಾರಡಿಗಗೆ ಸಪ್ತಾಂಗಮಂ ಕೊ ಟ್ಟು, ಮನ್ನಿಸಿ, ಕಳುಹಲಾಗಿ; ಅವಂ ಬಂದು, ಒಂದು ದೇವಸ್ಥಾನ ದೊಳು ಕುಳಿತು ಇರಲು; ಅಸ್ತಮಾನವಾಗಲಾಗಿ ಅಲ್ಲಿಯೇ ಉಳಿ ಯಲು; ಆ ರಾತ್ರೆಯಲ್ಲು ಒಂದು ಮೂಷಿಕಂ ಬಂದು, ಆ ಹಾವಿನ ಹೆಡಗೆಯಂ ಕಡಿದು, ಅದರಲ್ಲು ಅನ್ನ ತುಂಬಿ ಇದ್ದೀತು ಎಂದು, ನಿಶ್ಚೈಸಿ, ಅದರ ಒಳಯಿಂಕೆ ಹೊಗಲು; ಅಲ್ಲಿ ಇದ್ದ ಮಹಾ ಸರ್ಪನು ಕ್ಷುಧೆ ಯಿಂದ ಆ ಮೂಷಿಕನಂ ಭಕ್ಷಿಸಿತು.

ಅದು ಕಾರಣ ಆಹಾರದಲ್ಲು ಪರಾಂಬರಿಕೆ ಇರ ಬೇಕು ಎಂದು, ಹೇಳಿ, ಮತ್ತಿಂತೆಂದುದು—ಕುಳ್ಳಿರುವಲ್ಲಿ, ಮಲಗುವಲ್ಲಿ, ದೇಹದ ರಕ್ಷಣದಲ್ಲಿ, ಇರುವ ವಾಹನದಲ್ಲಿ, ಆಹಾರದಲ್ಲಿ, ಕೊಂಡು ಕೊಂಬ ಠಾವಿನಲ್ಲಿ, ತನ್ನ ಗೃಹ ದಲ್ಲಿ, ತನ್ನ ನೋಟದಲ್ಲಿ, ಇವು ಎಂಟು ಸ್ಥಳದಲ್ಲಿಯೂ ಅರಸುಗಳಿಗೆ ಪರಾಂಬರಿಕೆ ಇರ ಬೇಕು ಎಂದು, ಹೇಳಿ, ಆ ಮೂಷಿಕರಾಜಂ ತನ್ನ ಮಿತ್ರನಾಗಿ ಇರ್ದಂಥಾ ಚಿತ್ರ ಗ್ರೀವಂಗೆ ಅನೇಕ ಬುದ್ಧಿಯಂ ಕೊಟ್ಟು, ಆ ಹಕ್ಕಿಗಳ ನ್ನು ಕಳುಪಲು;

ಆ ಮೇಘವರ್ಮನೆಂಬ ವಾಯಸರಾಜಂ ಕಂಡು, ಮಹಾ ಚೋದ್ಯವಂ ಬಟ್ಟು ಈ ಮೂಷಿಕನೊಡನೆ ಸ್ನೇಹವ ಮಾಡ ಬೇಕು ಎಂದು, ಹೇಳಿ, ತಮಗೆ ಬಂದು ವಿಪತ್ತು ಆಪತ್ತು ಬಂದಾಗ ಪರಿಹರಿಸೀತು ಎಂದು, ನಿಶ್ಚ ಯಿಸಿ, ಆ ವಾಯಸಂ ಆ ಮೂಷಿಕನ ಬಳಿಗಂ ಬರಲು; ಅದು ನೀನಾರು? ಎಂದು, ಕೇಳಲಾಗಿ; ನಾನು ಚಿತ್ರಗ್ರೀ ವನ ಸ್ನೇಹಿತನಾದ ಮೇಘವರ್ಮನೆಂಬ ವಾಯಸಂ; ನಿ ನ್ನ ಗುಣ ಕಥನವಂ ಕೇಳಿ, ಮಹಾ ಸಂತೋಷವಂ ಬಟ್ಟು, ನಿನ್ನ ಕೂಡೆ ಸ್ನೇಹವಂ ಮಾಡ ಬೇಕು ಎಂ ದು, ಬಂದೆನೆನಲು; ಹಿರಣ್ಯಕಂ ಬಿಲದೊಳಿಂ ಹೊರವಡ ದೆ, ಈ ಸ್ಥಳವಂ ಬೇಗ ಬಿಟ್ಟು ಹೋಗೆನಲು; ವಾಯ ಸಂ ನಾನಾ ಪ್ರಕಾರದಿಂದ ಆತ್ಮಸ್ತುತಿಯಂ ಗೈಯಲಾಗಿ; ಅದು ನಂಬದೆ—ನೀನು ನನ್ನ ಜಾತಿಯಂ ಭಕ್ಷಿಸುವಂಥಾ ತನು; ನಿನಗೂ ನನಗೂ ಸ್ನೇಹವಿರುವದೆಂತು? ಪೋಗೆ ನಲು; ವಾಯಸಂ ಬಿಡದೆ ಬೇಡುತ್ತಂ—ನೀನು ಮಹಾ

ವಿದ್ವಾಂಸನು; ನಿನ್ನ ಬಿಲಕೋಟೆಯೊಳಿರ್ದು, ನನ್ನೊಡನೆ ಕಾಲಕಾಲಕ್ಕೆ ಸಂಕಥೆಯಂ ಮಾಡೆಂದು, ದೈನ್ಯಂಬಟ್ಟು, ನುಡಿಯಲಾ ಮೂಷಿಕಂ ಧೈರ್ಯವ ಮಾಡಿ ಕೊಂಡು—ಹಾಗಾಗಲಿ! ಎಲೇ ಮಿತ್ರಾ, ಮಹಾ ದೂರದಿಂದ ಬಂದಿ! ಎಂದು, ಉಪಚರಿಸಿ, ಮಹಾ ಸನ್ಮಾನಿಸಲು; ಆ ವಾಯಸರಾಜಂ ಇಂತೆಂದುದು—ನವಿಲು ಭೂಮಿಯ ಮೇಲೆ ಇದ್ದು, ಆಕಾಶದ ಮೇಘವಂ ಕಂಡು, ಸಂತೋಷವಂ ಬಡುವದು; ಒಂದು ಲಕ್ಷ ಯೋಜನದಲ್ಲಿ ಇರುವ ಸೂರ್ಯನಂ ಕಂಡು, ತಾವರೆ ಸಂತೋಷವಂ ಬಡುವದು; ಎರಡು ಲಕ್ಷ ಯೋಜನದಲ್ಲಿ ಇರುವ ಚಂದ್ರಮನಂ ಕಂಡು, ನೈದಿಲು ಸಂತೋಷವಂ ಬಡುವದು; ಈ ಪ್ರಕಾರದಲ್ಲಿ ಸ್ನೇಹಿತರು ಎಷ್ಟು ದೂರದಲ್ಲಿ ಇದ್ದರೆಯೂ ಸಂತೋಷವಂ ಬಡುವರು. ತದನಂತರಂ ಮೂಷಿಕನು ಮಹಾ ಸಂತೋಷವಂ ಬಟ್ಟು, ಈ ವಾಯಸರಾಜನೊಡನೆ ನಿತ್ಯ ಮಹಾ ಸ್ನೇಹವಂ ಮಾಡಿ ಕೊಂಡು, ಹರುಷದಿಂದ ಇರಲು;

ಒಂದು ದಿವಸ ಚಿತ್ರಾಂಗದನೆಂಬ ಎರಳೆಯು ತನ್ನ ಹಿಂಡು ತಪ್ಪಿ ಮಹಾ ಕ್ಷುಧೆಯಿಂದ ಬರುತ್ತಾ ಇರಲು; ಈ ಮೂಷಿಕ ವಾಯಸಂಗಳು ಕಂಡು, ನೀನಾರು? ಎಂದು, ಕೇಳಲು; ನಾನು ಚಿತ್ರಾಂಗದನೆಂಬ ಎರಳೆಯು; ನನ್ನ ಹಿಂಡು ತಪ್ಪಿ ಬಂದೆನು ಎನಲು; ಈ ಮೂಷಿಕ ವಾಯಸಂಗಳು ತಮ್ಮೊಳು ಆಲೋಚಿಸಿ ಕೊಂಡು, ಅನಾಥರಾಗಿ ಬಂದವರ ರಕ್ಷಿಸ ಬೇಕು ಎಂದು, ತಮ್ಮ ಸ್ಥಳಕ್ಕೆ ಕರದೊಯ್ದು, ಅದಕ್ಕೆ ಆಹಾರವಂ ಕೊಟ್ಟು, ಮನ್ನಿ

ಸಿ, ಆ ಎರಳೆಯೊಡನೆ ಅತಿ ಸ್ನೇಹವಂ ಮಾಡಿ ಕೊಂಡು, ತಾವು ಮೂವರು ಆಗಿ, ಸುಖದಿಂದ ಇದ್ದು, ಒಂದು ದಿವಸ ತಾವು ಮೂವರು ಮಹಾ ಸಂತೋಷದಿಂ ವನಾಂತರವ ನೋಡುತ್ತಾ ಬರಲು;

ಒಂದು ಉದಕವಿಲ್ಲದ ಕೆರೆಯಲ್ಲು ಮಂಥರಕನೆಂಬ ಕೂರ್ಮನು ಮಹಾ ಚಿಂತೆಯಿಂ ಶೋಕಿಸುತ್ತಾ ಇರಲು; ಅದನ್ನು ಕಂಡು, ಈ ಮೂವರು ಮಹಾ ವಿಸ್ಮಯಂಬಟ್ಟು, ಆ ಕೂರ್ಮನ ಬಳಿಗಂ ಬಂದು, ನೋಡಲು; ಎಲೇ ಮಹಾ ಪುರುಷಗಳಿರಾ, ನಾನು ಅನಾಥನಾಗಿ ಇದ್ದೇನೆ, ನನ್ನ ರಕ್ಷಿಸ ಬೇಕು ಎಂದು, ಬಹು ದೈನ್ಯವಂ ಬಡಲು; ಈ ಮೂವರು ಮಹಾ ಕರುಣದಿಂದ ಆ ಕೂರ್ಮನಂ ತೆಗದು ಕೊಂಡು ಬಂದು, ತಾವು ನಾಲ್ವರು ಆಗಿ, ಮಹಾ ಹರುಷದಿಂದ ಇರಲು;

2. ಆ ನಾಲ್ವರು ಮಿತ್ರರಾಗಿ ಬದುಕಿದ್ದು.

ಒಂದು ದಿವಸಂ ಚಿತ್ರಾಂಗದನೆಂಬ ಎರಳೆಯು ತನ್ನ ಆಹಾರ ನಿಮಿತ್ಯವಾಗಿ ಹೋಗಿ, ಒಂದು ವನಾಂತರದಲ್ಲು ಒಬ್ಬ ಬೇಟೆಗಾರನ ಬಲೆಯೊಳಗೆ ಶಿಕ್ಕಿ, ಎಂದಿನಂತೆ ಮಧ್ಯಾಹ್ನಕ್ಕೆ ಬಾರದೆ ಇರಲು; ಆ ಮೂವರು—ಚಿತ್ರಾಂಗದ ಬಾರನು; ಏನು ಕಾರಣ ತಡದನು? ಎಂದು, ಮಹಾ ನೊಂದು ಕೊಂಡು, ಆ ಮೂಷಿಕರಾಜನು ವಾಯಸರಾಜನಂ ಕರದು—ನೀನು ಖೇಚರಮಾರ್ಗದಲ್ಲು ಹೋಗಿ, ಏನಾದನು ಎಂದು, ನೋಡಿ, ಬಾ! ಎಂದು, ಕಳುಪಲು; ಆ ವಾಯಸರಾಜನು ಅತಿವೇಗದಿಂದ ನೋಡುತ್ತಾ ಬರಲು; ಈ ಬಲೆಯೊಳಗೆ ಶಿಕ್ಕಿದ ಚಿತ್ರಾಂಗದನಂ ಕಂ

ಡು, ಮಹಾ ದುಃಖಂಗೊಂಡು, ಆ ಚಿತ್ರಾಂಗದನಂ ಸಂತವಿಟ್ಟು, ಅಂಜ ಬೇಡಾ! ಎಂದು, ಹೇಳಿ, ತಾನು ಅತಿವೇಗದಿಂದ ಮೂಷಿಕರಾಜನ ಬಳಿಗೆ ಬಂದು, ಈ ಸ್ಥಿತಿಯಂ ಹೇಳಲು; ಆ ಮೂಷಿಕಂ ನೊಂದು ಕೊಂಡು, ತನ್ನೊಳು ಆಲೋಚಿಸಿ, ಒಂದು ಉಪಾಯವುಂ ಕಂಡು, ವಾಯಸರಾಜನಂ ಕರದು, ಅದರ ಬೆನ್ನ ಮೇಲೆ ತಾನು ಏರಿ ಕೊಂಡು, ಆ ಚಿತ್ರಾಂಗದನ ಬಳಿಗಂ ಬಂದು, ಬೇಟೆಗಾರಂ ಮಲಗಿ ಇರಲು; ಅದರ ಬಲೆಯಂ ಕಡದು, ಬಂಧನವಂ ಬಿಡಿಸಿ, ಸಂತೋಷದಿಂದ ತಮ್ಮ ಸ್ಥಳಕಂ ಬಂದು, ತಾವು ನಾಲ್ವರು ಸಲಿಗೆಯಾಗಿ ಇರಲು;—ತನ್ನ ಕಣ್ಣು ಕಾಲ್ಗಳೂ ಕರಣಂಗಳೂ ತನಗಾವ ಪ್ರಕಾರದಿಂದ ಹಿತವಾಗಿ ಇದ್ಧಾವೆ, ಆ ಪ್ರಕಾರದಲ್ಲಿ ಹಿತವಾಗಿ ಇದ್ದವರು ಇರ ಬೇಕು; ಅದಲ್ಲದೆಯೂ—ಆಕಾಶಕ್ಕೆ ಸೂರ್ಯ ಚಂದ್ರಾದಿಗಳೇ ಅಲಂಕಾರ, ಐಶ್ವರ್ಯಕ್ಕೆ ತ್ಯಾಗವೇ ಅಲಂಕಾರ, ಆಸ್ಥಾನಕ್ಕೆ ವಿದ್ವಾನುಗಳೇ ಅಲಂಕಾರ, ತಾವರೆ ಕಮಲಗಳಿಗೆ ತುಂಬಿಗಳೇ ಅಲಂಕಾರ, ವಸಂತಕಾಲಕ್ಕೆ ಕೋಗಿಲೆಯೇ ಅಲಂಕಾರ, ವಚನಕ್ಕೆ ಸತ್ಯವೇ ಅಲಂಕಾರ, ಒಳ್ಳತಾಗಿ ಇದ್ದವನು ಸರ್ವರಿಗೂ ಅಲಂಕಾರ; ಮತ್ತು—ಐಶ್ವರ್ಯವುಳ್ಳ ಮನುಜಗೆ ವಿನಯ ವಿದ್ಯ ಔದಾರ್ಯ ಇವು ಮೂರು ಅಲಂಕಾರ, ಬಡವರಾಗಿದ್ದವರಿಗೆ ಮಿತ್ರರಾಗಿ ಕೂಡಿರುವದೇ ಅಲಂಕಾರ; ಇಂತೆಂಬ ನೀತಿಯನರಿದು, ಆ ಮೂಷಿಕ ವಾಯಸ ಎರಳೆ ಕೂರ್ಮ ಸಹ, ಸಾಭ್ರಾತ್ರದಿಂದ ಕೂಡಿ ಕೊಂಡು, ಇರಲು; ಒಂದು ದಿವಸ ಇವರು ಮೂಷಿಕರಾಜನೊಡನೆ, ನಿನಗೆ ಹಿರಣ್ಯಾವ

ರ್ಮನೆಂಬ ಹೆಸರು ಯಾಕೆ ಬಂತು? ಎಂದು, ಕೇಳಲು; ಆ ಮೂಷಿಕ ಇಂತೆಂದುದು–ದಾರಿಯಲ್ಲು ನಡವುತ್ತಾ ಏನನ್ನಾದರೂ ಭಕ್ಷಿಸುವವನೊಬ್ಬನೂ ನಕ್ಕು ನಕ್ಕು ಮಾತನಾಡುವವನೊಬ್ಬನೂ ಪೂರ್ವದಲ್ಲು ಇದ್ದ ಭಾಗ್ಯ ವನ್ನು ಬಡತನದಲ್ಲಿ ಹೇಳಿ ಕೊಂಬುವನೊಬ್ಬನೂ ಇ ಬ್ಬರು ಏಕಾಂತದಲ್ಲು ಇದ್ದಾಗ ಸಂಧಿಸಿ ಮಾತ ಕೇಳು ವವನೊಬ್ಬನೂ ಇವರು ಪರಮ ಮೂರ್ಖರು ಎಂದೆನಿಸಿ ಕೊಂಬರು; ಅದು ಕಾರಣದಿಂದ ತನ್ನ ಪೂರ್ವದ ಧೊರೆ ತನವ, ಬಡತನ ಬಂದಾಗ, ಹೇಳ ಬಾರದು! ಎನಲು; ಇವರು ಮೂವರು ಬೇಡಿ ಕೊಂಡು, ನಿನ್ನ ವೃತ್ತಾಂತ ಮಂ ಹೇಳ ಬೇಕು ಎನಲು; ಆ ಮೂಷಿಕರಾಜಂ ಇಂ ತೆಂದುದು–

## ೨ನೇ ಕಥೆಯ ಮೊದಲಿನ ಭಾಗ.

ಮೂಷಿಕವು ಇಬ್ಬರು ಯತೀಶ್ವರರಲ್ಲಿದ್ದು ಬಂದದ್ದು.

ಮಾಳವ ದೇಶದಲ್ಲು ಸುವರ್ಣಪುರವೆಂಬ ಪಟ್ಟಣದಲ್ಲು ಚಂದ್ರಶೇ ಖರನೆಂಬ ರಾಯಂ ಮಹಾ ಧರ್ಮದಿಂದ ರಾಜ್ಯವನಾಳುತ್ತಂ ಇರ ಲು; ಆ ಪುರದೊಳಗೋರ್ವ ತಾಮ್ರಚೂಡನೆಂಬ ಯತೀಶ್ವರನು ಒಂ ದು ಮಠವಂ ಮಾಡಿ ಕೊಂಡು, ಶಿಷ್ಯರುಗಳಿಗೆ ವಿದ್ಯಂಗಳಂ ಹೇಳಿ ಕೊಂಡು, ಪರಿಣಾಮದಲ್ಲು ಇರಲು; ಆ ಮಠದಲ್ಲು ಒಂದು ಬಿಲದ್ವಾ ರದ ಕೆಳಗೆ ಏಳು ಕೊಪ್ಪರಿಗೆ ದ್ರವ್ಯವು ಇರುವುದು; ಆ ನಿಕ್ಷೇಪವ ಕಾ ದು ಕೊಂಡು, ಅದರ ಕರ್ತನಾಗಿ, ಮಹಾ ಸಂತೋಷದಿಂದ ಇರುವೆ ನು; ಆ ಯತೀಶ್ವರ ನನ್ನಂ ಕಂಡು, ಕರದು, ಮಹಾ ಕರುಣದಿಂದ, ತಾ ನು ಆರೋಗಣೆಯ ಮಾಡುವಾಗ, ನನಗೂ ಅನ್ನವನಿಕ್ಕುವನು; ನನಗೆ ನೆಂಟರಿಷ್ಟರು ಎಲ್ಲರು ಕೂಡಿ ಹಿರಣ್ಯವರ್ಮನೆಂಬ ಹೆಸರನ್ನಿಟ್ಟು, ನನ್ನ ನೆಂಟರು ನನ್ನ ಓಲೈಸಿ ಕೊಂಡು, ಸುಖದಲ್ಲು ಇರುತ್ತಾ ಇರಲು; ಒಂ

ದು ದಿವಸ ಆ ಯತೀಶ್ವರನ ಮಠಕ್ಕೆ ಗುಜ್ಜರ ದೇಶದಿಂದ ಹರೀಂದ್ರಪಾಲನೆಂಬ ಯತೀಶ್ವರನು ಬರಲು; ಈ ತಾಮ್ರಚೂಡನೆಂಬ ಯತೀಶ್ವರನು ಮಹಾ ಹರುಷದಿಂದ ಅರ್ಘ್ಯ ಪಾದ್ಯ ಆಸನವಂ ಕೊಟ್ಟು, ಭಕ್ತಿಯಿಂದ ಪೂಜೆಯಂ ಮಾಡಿ, ಅವರೀರ್ವರು ಮಹಾ ಹರುಷದಿಂದ ಕೂಡಿ ಇರಲು; ಒಂದು ದಿವಸ ಆ ಯತೀಶ್ವರಂ ಭಿಕ್ಷವ ಮಾಡುವ ಸಮಯದಲ್ಲು ನಾನು ಹೊರಡಲು; ಆ ಬಂದ ಯತೀಶ್ವರ ನನ್ನ ಕಂಡು, ನನ್ನ ಸುವರ್ಣಛಾಯವಮಂ ಕಂಡು, ಮಹಾ ವಿಸ್ಮಯಂ ಬಟ್ಟು, ಈ ಮೂಷಿಕ ಎಲ್ಲಿ ಇಹುದು? ಎಂದು, ಕೇಳಲು; ಆ ಮೊದಲು ಇದ್ದ ಯತೀಶ್ವರನು, ಇದು ಬಹು ಕಾಲದಿಂದ ಈ ಮಠದಲ್ಲು ಇದ್ದಿತು ಎನಲು; ಇಲ್ಲಿ ನಿಕ್ಷೇಪ ಇದ್ದೀತು ಎಂದು, ಹೇಳಲು; ಅದು ಕಾರಣ ಸುವರ್ಣಛಾಯವಾಗಿ ಅದೆ ಎಂದು, ಹೇಳಿ, ಆ ಬಿಲದ್ವಾರವಮಂ ಅಗದು, ನೋಡಲು; ಅಲ್ಲಿ ಏಳು ಕೊಪ್ಪರಿಗೆ ದ್ರವ್ಯವು ಇರಲು; ಅದನ್ನು ತೆಗದು ಕೊಂಡು, ಅವರು ಸುಖದಲ್ಲು ಇರಲು; ಆ ಮೊದಲು ಇದ್ದಂಥಾ ಯತೀಶ್ವರಂ ಈ ದ್ರವ್ಯ ಶಿಕ್ಕಿದುದಂ ಕಂಡು, ಮಹಾ ಲೋಭತ್ವದಿಂದ ಇರಲು; ಆ ಬಂದ ಯತೀಶ್ವರನು—ನಮಗೆ ಲೋಭತ್ವ ಸಲ್ಲದು; ಮೊದಲೇ ನಾವು ಸರ್ವಸಂಗಪರಿತ್ಯಾಗವ ಮಾಡಿದಂಥಾ ಯತಿಗಳು; ಲೋಭತ್ವದಿಂದ ಕೆಡುವರು! ಎನಲು; ಅದು ಹ್ಯಾಗೆ? ಎಂದು, ಕೇಳಲಾಗಿ; ಆ ಋಷಿಯಿಂತೆಂದಂ—

## ೩ನೇ ಕಥೆ.

### ಅತ್ಯಾಶೆಯುಳ್ಳ ನರಿ ಕೆಟ್ಟದ್ದು.

ಮಂದರ ಪರ್ವತದ ತಪ್ಪಲಲ್ಲು ತಮರಾಶಿಯೆಂಬುದೊಂದು ಘೋರಾರಣ್ಯದಲ್ಲು ಒಬ್ಬ ಬೇಟೆಗಾರಂ ಬಂದು, ಬಲೆಯಂ ಹಾಕಿ ಕೊಂಡು, ಒಂದು ಹರಿಣನ ಕೊಂದು, ಹೊತ್ತು ಕೊಂಡು ಹೋಗುತ್ತಂ ಇರಲು; ಒಂದು ಕಾಡ ಹಂದಿಯು ಈ ಬೇಟೆಗಾರನಂ ಕಂಡು, ಮಹಾ ಭರದಿಂದ ಬಂದು, ಹೊಯ್ಯಲು; ಅವನು ಈಟಿಯಲ್ಲು ಇರಿಯಲು; ಆ ಹಂದಿಯು, ಈ ಬೇಟೆಗಾರನು, ಆ ಹರಿಣ ಸಹಾ, ಮೂವರು ದಾರಿಯು

ಲ್ಲಿ ಸತ್ತು ಬಿದ್ದು ಇರಲು; ಒಂದು ಜಂಬುಕಂ ವನಾಂತರವಮಂ ತೊಳಲುತ್ತಾ, ಮೇವಂ ಕಾಣದೆ, ಮಹಾ ಕ್ಷುಧೆಯಿಂದ ಬರುತ್ತ ಇರಲು; ಹಾದಿಯಲ್ಲಿ ಬಿದ್ದವರಂ ಕಂಡು, ಮಹಾ ಸಂತೋಷದಿಂದ—ಈ ಮನುಷ್ಯ ನಾಲ್ಕು ದಿನದ ಆಹಾರ, ಈ ಹಂದಿ ಐದು ದಿನ, ಈ ಮೃಗ ಆರು ದಿನ, ಹ್ಯಾಗಾದರೂ ಹದಿನೈದು ದಿವಸ ಪರಿಯಂತರ ತನಗೆ ಆಹಾರ ದೊರಕಿತು! ಎಂದು, ಹೇಳಿ, ಆ ಬೇಟೆಗಾರನ ಕೈಯಲ್ಲಿ ಏರಿಸಿದ ಚಾಪಮಂ ಕಂಡು, ಸ್ನಾಯುಪಾಶವ ತಿನ್ನುತ್ತಾ ಇರಲು; ಅವನು ಹಿಡಿದ ಬಿಲ್ಲಿನ ನರಂ ಹರಿಯಲು; ಆ ಬಿಲ್ಲು ಹೊಡಿಯಲಾಗಿ ಆ ಜಂಬುಕಂ ಪಂಚತ್ವವನ್ನೈದಿತು.

## ೨ನೇ ಕಥೆಯ ಎರಡನೇ ಭಾಗ.

ಅದು ಕಾರಣ ಲೋಭತ್ವದಿಂದ ಇದ್ದವರು ಕೆಡುವರು; ಈ ದ್ರವ್ಯವ ಬಚ್ಚಿಡ ಬಾರದು, ನಾನಾ ತರದಿಂದ ಈ ದ್ರವ್ಯವನ್ನು ದಾನಧರ್ಮ ಪರೋಪಕಾರಂಗಳಂ ಮಾಡ ಬೇಕೆಂದು, ಹೇಳಲು; ಆ ಮಾತಿಗೆ ಆ ಯತೀಶ್ವರಂ ಚಿತ್ತವಂ ಕೊಟ್ಟು, ಸಮಸ್ತ ದಾನಗಳ ಒಳಗೆ ಯಾವದು ದೊಡ್ಡಿತು? ಎಂದು, ಕೇಳಲು; ಆ ಹರೀಂದ್ರಪಾಲ ಯತಿಯು, ಎಲ್ಲಾ ದಾನಕ್ಕೂ ಅನ್ನದಾನವೇ ವೆಗ್ಗಳವೆಂದು, ಹೇಳಲು; ಅದೆಂತೆನೆ—

## ೪ನೇ ಕಥೆ.

ಧರ್ಮದ ಫಲವ ಕೇಳಿದ ರಾಯನು.

ನೀಲಾಚಲದ ತಪ್ಪಲಲ್ಲಿ ಭೋಗವತಿಯೆಂಬ ಪಟ್ಟಣದಲ್ಲಿ ದಾರಿದ್ರನಾಶಿಯೆಂಬ ರಾಯಂ, ಧರ್ಮವತಿಯೆಂಬ ಸತಿಯು, ಬಾಹುವಿಕ್ರಮನೆಂಬ ಕುಮಾರಂ, ಕೀರ್ತಿವಂತನೆಂಬ ಪ್ರಧಾನಂ ಸಹಿತ ಮಹಾ ಸಖ್ಯ ಧರ್ಮದಿಂದ ರಾಜ್ಯವನಾಳುತ್ತಂ ಇರಲು; ಆ ರಾಯಂ ಸಕಲ ದಾನಂಗಳ ಮಾಡುತ್ತ, ಪರೋಪಕಾರಂ ಮಾಡುತ್ತ, ಮಹಾ ಸಖ್ಯದಿಂದ ಸಕಲ ಪ್ರಾಣಿಗಳಿಗೆ, ಆರು? ಎಂದು ನೋಡದೆ, ಅನ್ನದಾನವಂ ಮಾಡುತ್ತಂ ಇರಲು; ಮಹಾ ವಿದ್ವಾಂಸರಾದಂಥಾ ಬ್ರಾಹ್ಮಣರು ಆ ರಾಯನ

ಹತ್ರದಲ್ಲು ದಿವ್ಯಾನ್ನಮಂ ಭುಂಜಿಸಿ, ಆ ರಾಯಂಗೆ ಮಹಾ ಹರುಷ ದಿಂದ ಇಂತೆಂದರು—ಮೇಘೋದಕದಿಂದ ಬಿಟ್ಟು ಉದಕವಿಲ್ಲಾ, ತನ್ನ ದೃಷ್ಟಿಯಿಂದ ಬಿಟ್ಟು ತೇಜಸ್ಸವಿಲ್ಲಾ, ಧರ್ಮದಿಂದ ಬಿಟ್ಟು ಬಂಧುಗಳು ಇಲ್ಲಾ, ಅನ್ನದಾನದಿಂದ ಬಿಟ್ಟು ದಾನವಿಲ್ಲಾ; ಇಂತೆಂಬ ನೀತಿಯನ್ನರಿದು, ಹೇಳಲು; ಆ ರಾಯಂ ಮಹಾ ಅನ್ನದಾನಂ ಮಾಡುತ್ತ, ಒಂದು ದಿವಸ ಒಡ್ಡೋಲಗಂಗೊಟ್ಟು, ಕುಳಿತು, ತನ್ನಲ್ಲು ಇದ್ದ ವಿದ್ವಾಂಸರಂ ಕರಸಿ, ಅವರ ಕೂಡೆ, ಅನ್ನದಾನದಿಂದ ಫಲವೇನು? ಎಂದು, ಕೇಳಲು; ಆ ವಿದ್ವಾಂಸರುಗಳು—ಅನ್ನದಾನದ ಫಲಕ್ಕೆ ಅವಧಿ ಯಾವದು? ಅದ ಇನ್ನೇನ ಹೇಳುವೆವು? ಎಂದು, ತಮ್ಮೊಳು ಆಲೋಚಿಸಿ ಕೊಂಡು, ಅನ್ನದಾನದ ಫಲವ ಎಂಟು ದಿವಸಕ್ಕೆ ಹೇಳುವೆವು ಎಂದು, ಕಟ್ಟಳೆಯಂ ಮಾಡಿ ಕೊಂಡು, ಆ ರಾಯನಂ ಬೀಳ್ಕೊಂಡು, ತಮ್ಮ ತಮ್ಮ ಗೃಹಕಂ ಬಂದು, ಸಕಲ ವಿದ್ವಾಂಸರು ಎಲ್ಲಾ ಯೋಚನೆಗೊಂಡು, ಅನ್ನದಾನದ ಫಲಕ್ಕೆ ಮಿತಿಗಟ್ಟಲಾರದೆ, ಮಹಾ ಚಿಂತೆಯಿಂದ ಬಳಲಿ, ನಿದ್ರೆ ಗೈಯಲು; ಆ ರಾಯನ ಮನೆಯಲ್ಲು ಪೂಜೆ ಮಾಡುವ ಬ್ರಾಹ್ಮಣಂಗೆ—ಈ ರಾಯನ ಮಹತ್ವವನ್ನು ಹೇಳುವರೆ ನಿಮ್ಮ ಕೈಯಲ್ಲು ಏನು ಆದೀತು? ಕಾಸಿ ಎಂಬ ಪಟ್ಟಣ ಅದೆ; ಆ ಪಟ್ಟಣವನ್ನಾಳುವ ರಾಯನ ಸತಿಯು ಮಹಾ ಪುಣ್ಯವತಿಯು; ಆಕೆಯು ಗರ್ಭಿಣಿಯಾಗಿ ಇರುವಳು; ಆಕೆಯ ಗರ್ಭದಲ್ಲು ಒಂದು ಗಂಡು ಶಿಶುವು ಒಂದು ಹೆಣ್ಣು ಶಿಶುವು, ಆ ರೀತಿಯಲ್ಲು ಎರಡು ಶಿಶುವುಗಳು ಹುಟ್ಟ್ಯಾವು; ಆ ಶಿಶುವು ಹುಟ್ಟಲಾಗಿ ಅದರ ಕೇಳಲು, ಅನ್ನದಾನದ ಫಲವನ್ನು ಹೇಳುವರು ಎಂದು, ಸ್ವಪ್ನವಾಗಲು; ಆ ಬ್ರಾಹ್ಮಣನು ಎದ್ದು, ಯೋಚಿಸಿ ಕೊಂಡು, ಅಲ್ಲಿ ಇದ್ದ ವಿದ್ವಾಂಸರುಗಳಿಗಂ ಹೇಳಲು; ಆ ವಿದ್ವಾಂಸರು ಎಲ್ಲಾ—ನೀನು ಕಂಡ ಸ್ವಪ್ನಂ ನಿಶ್ಚಯ; ರಾಯನ ಕೂಡೆ ಹೇಳ ಬಹುದು ಎಂದು, ಸಮಸ್ತ ವಿದ್ವಾಂಸರು ಬಂದು, ಈ ವಿವರಮಂ ರಾಯನ ಕೂಡೆ ಹೇಳಲು; ಆ ರಾಯಂ ಮಹಾ ಸಂತೋಷಮಂ ಬಟ್ಟು, ತನ್ನ ರಾಜ್ಯದ ಪಟ್ಟಮಂ ತನ್ನ ಮಗ ಬಾಹುವಿಕ್ರಮಂಗೆ ಕಟ್ಟಿ, ಪ್ರಧಾನಂಗೆ ಕೈವರ್ತಿಸಿ ಕೊಟ್ಟು, ತಾನು ಬ್ರಾಹ್ಮಣವೇಷದಲ್ಲು ಕಾಸೀ ರಾಜ್ಯದ

ಮಾರ್ಗದಲ್ಲು ಹೋಗುತ್ತಂ ಇರಲು; ಒಂದು ದಿವಸ ಆ ರಾಯಂ, ದಾರಿಯು ತಪ್ಪಿ, ಮಹಾ ಘೋರಾರಣ್ಯದೊಳು ಬರುತ್ತಾ, ದೃಷ್ಟ ಮುಖಿಯೆಂಬ ಪರ್ವತದ ಸಮೀಪಕ್ಕಂ ಬರಲು; ಆ ಪರ್ವತದ ಮೇಲೆ ಒಂದು ಗುಹೆಯಲ್ಲು ಒಬ್ಬ ಹಿಂಸಾಧಮನೆಂಬ ಬೇಡನು ತನ್ನ ಸತಿ ಸಹಾ ಇರುವನು; ಆ ಬೇಡನು ಆ ಕಾಸಿ ಪಟ್ಟಣದ ರಾಯನ ಕುಮಾರನಂ ಕದ್ದು ತಂದು, ಬಂಧನದೊಳಿರಿಸಿ, ಬ್ರಾಹ್ಮಣರು ಎಂದು ನೋಡದೆ, ಮನದೊಳಗೆ ದಯ ಮಾತ್ರವು ಇಲ್ಲದೆ, ನಿರ್ದಯದಿಂದ ಸರ್ವರ ಪ್ರಾಣಮಂ ಕೊಂದು, ಅವರ ಸುಲಿಗೆಯಂ ತೆಗದು ಕೊಂಡು, ಆ ಪ್ರಕಾರದಿಂದ ಮಹಾ ಪಾತಕಮಂ ಮಾಡಿ ಕೊಂಡು, ಬಹು ದಿವಸದ ಆರಭ್ಯ ಆ ಪರ್ವತದ ಗುಹೆಯಲ್ಲು ಅಡಗಿ ಕೊಂಡು ಇರುವನು. ಈ ರಾಯಂ ಅಸ್ತಮಯಕಾಲಕ್ಕಂ ಬಂದು, ಈ ಸತಿಯಂ ಕಂಡು, ಕಳ್ಳನ ಮನೆ ಎಂದರಿಯದೆ, ಸಮೀಪಕ್ಕಂ ಬರಲು; ಆ ಸತಿಯು ಈತನಂ ಕಂಡು, ಮಹಾ ದಯದಿಂದ — ಎಲೇ ಬ್ರಾಹ್ಮಣೋತ್ತಮನೇ, ಇಲ್ಲಿಗೇತಕೆ ಬಂದಿ? ಇಲ್ಲಿ ಒಬ್ಬ ಕ್ರೂರಕರ್ಮನಿಹನು; ನಿನ್ನ ಕಂಡರೆ ಕೊಂದಾನು; ಹೋಗು! ಎನಲು; ನಾನು ಬಹಳ ಬಳಲಿ ಬಂದೆನು, ಇನ್ನೆಲ್ಲಿಗೂ ಹೋಗಲಾರೆನು ಎನಲು; ಆತನು ಬಂದು ತನ್ನ ಕೊಂದರೆ ಕೊಲ್ಲಲಿ! ಎಂದು, ಮಹಾ ಮನೋವ್ಯಥೆಯಿಂದ ನುಡಿಯಲು; ಆ ಸ್ತ್ರೀಯು ಈತನ ಕರದೊಯ್ದು, ಒಂದು ಕೋಡುಗಲ್ಲಿನ ಗುಹೆಯಲ್ಲು ಬಚ್ಚಿಟ್ಟು, ಇರಿಸಲಾಗಿ; ಆ ಚೋರಂ ಅಸ್ತಮಯವಾದ ಮೇಲೆ ಬರಲು; ಆ ಸತಿಯು ಆತನ ಉಪಚರಿಸಿ, ಮಜ್ಜನ ಭೋಜನಾದಿಗಳಂ ಮಾಡಿಸಿ, ಮಹಾ ಭಕ್ತಿಯಿಂದ ಇರಲು; ಆ ಚೋರಂ ಮಹಾ ಸಂತೋಷಮಂ ಬಟ್ಟು, ತನ್ನ ಸತಿಯಂ ಕೊಂಡಾಡಿ, ಬೋಳವಿಸಿ ಇರಲು; ಆಕೆಯು, ಎಲೇ ಸ್ವಾಮಿ, ನನ್ನ ಬಿನ್ನಪಮಂ ಪಾಲಿಸಿ ಕೊಳ ಬೇಕು ಎನಲು; ಅದೇನು? ಎಂದು, ಆತನು ಬೆಸಗೊಳಲಾಗಿ; ಒಬ್ಬ ವೃದ್ಧ ಬ್ರಾಹ್ಮಣನು, ಹೊಲಬು ತಪ್ಪಿ, ಬಂದನು; ಆತನ ಪ್ರಾಣಮಂ ಕಾಯ ಬೇಕು! ಎನಲು; ಆ ಮಾತಂ ಕೈಕೊಂಡು, ಮಹಾ ಹರುಷದಿಂದ ಈಕೆಗೆ ನಂಬುಗೆಯಂ ಕೊಟ್ಟು, ದಯದಿಂದ ಮನ್ನಿಸಿ, ಮೂರು ಶೆರೆ ಬಿದರ ಅಕ್ಕಿಯಂ ಜೇ

ನುತುಪ್ಪವಮಂ ಕೊಟ್ಟು, ಆ ವಿಪ್ರನಿದ್ದ ಗುಹೆಯಲ್ಲಿ ಇರಿಸಿ, ತಾವು ಇಬ್ಬರು ಹೋಗಿ, ಬಾಗಿಲಲ್ಲಿ ಕುಳಿತು, ಕಾದು ಕೊಂಡು ಇರಲು; ಆ ಮೇಲೆ ಅವರಿಬ್ಬರು ಮಲಗಲಾಗಿ; ಆ ರಾತ್ರೆಯಲ್ಲಿ ಒಂದು ವ್ಯಾಘ್ರನು ಬಂದು, ಆ ಚೋರನಂ ಅವನ ಸತಿಯ ಸಹಾ ಮುರಿದು, ಭಕ್ಷಿಸಲು; ಉದಯವಾಗಲಾಗಿ ಆ ವಿಪ್ರನು ಎದ್ದು, ಬಂದು, ಈ ಬಿದ್ದಿದ್ದ ಚೋರನಂ ಮತ್ತು ಆತನ ಸತಿಯಂ ಕಂಡು, ಶೋಕವಮಂ ಗೈದು, ಮತ್ತು ಬಂಧನದೊಳಿದ್ದ ರಾಜಕುಮಾರನಂ ಕಂಡು, ಬಿಡಿಸಿ, ಆತನ ಪೂರ್ವ ವೃತ್ತಾಂತವಮಂ ಕೇಳಿ, ಹರುಷದಿಂ ಆತನಂ ಕೂಡಿ ಕೊಂಡು ಬಂದು, ಕಾಸಿ ಪಟ್ಟಣವಮಂ ಸೇರಿ, ಸ್ನಾನವಮಂ ಮಾಡಿ, ಆ ರಾಯನ ಬಳಿಗಂ ಪೋಗಿ, ಕುಮಾರನಂ ತಂದು ಕೊಡಲಾ ರಾಯಂ ಮಹಾ ಹರ್ಷಿತನಾಗಿ, ನಾನಾ ಪ್ರಕಾರದಿಂದ ಮನ್ನಿಸಿ, ನಿನಗೆ ಮತ್ತೇನು ಬೇಕು, ಬ್ರಾಹ್ಮಣಾ? ಎಂದು, ಕೇಳಲು; ಈತಂ ತನಗೇನೂ ಬೇಡಾ, ಆ ಹುಟ್ಟಿದ ಶಿಶುಗಳ ನೋಡಿ ಹೋಗುವೆನೆನಲು; ಆ ರಾಯನು ಬಹು ಚೋದ್ಯಮಂ ಬಟ್ಟು, ಆವ ಶಿಶುಗಳಂ ನೋಡುವಿರೆನಲು; ಆ ದಾರಿದ್ರನಾಶಿ ರಾಯಂ ತನ್ನ ಪೂರ್ವ ವೃತ್ತಾಂತವೆಲ್ಲಾ ವಿವರಿಸಿ ಪೇಳಲು; ಆತಂ ಕೇಳಿ, ಮಹಾ ವಿಸ್ಮಯಂ ಬಟ್ಟು—ಎಲೇ ಮಹಾ ಪುಣ್ಯಶ್ಲೋಕರಾಯ, ಅಂಥಾ ಶಿಶುಗಳನೆಲ್ಲಿಯೂ ಕಾಣೆನು; ನಾನೇ ಅನ್ನದಾನದ ಫಲವ ಹೇಳ್ವೇನು, ಕೇಳು! ಸಕಲ ಪ್ರಾಣಿಗಳನ್ನು ಕೊಂದು ಮಹಾ ಜೀವಹಿಂಸೆಯಂ ಮಾಡಿ ಪಾತಕದಿಂದಲೇ ಹೊಟ್ಟೆ ಹೊರೆದ ಆ ಕಳ್ಳರ ಕೈಯಲ್ಲಿ ಬಿದ್ದು, ಉಪಚಾರವನನುಭವಿಸಿ ಬಂದಿ; ನನ್ನ ಅಕ್ಕರೆಯ ಕುಮಾರನಂ ತಂದು ಕೊಟ್ಟು, ನನ್ನಂ ಬದುಕಿಸಿದಿ; ನಿನ್ನ ಪುಣ್ಯದಿಂದಲೂ ನೀನಲ್ಲ ಆ ಬೇಡನು ತನ್ನ ಸತಿ ಸಹಿತಂ ವ್ಯಾಘ್ರಗ್ರಾಸವಾಗಿ ಕೆಟ್ಟು, ರಾಜ್ಯದ ಸಕಲ ಪ್ರಜೆಗೆ ಉದ್ಧಾರಮಾದುದು; ಇನ್ನೇನ ಹೇಳುವೆನು? ಧರ್ಮದ ಫಲವ ನೋಡೆಂದು, ಅತಿ ಪ್ರೇಮದಿಂದ ವಂದನೆಯಂ ಗೈದು, ವಸ್ತ್ರಾಭರಣಮಂ ಕೊಟ್ಟು, ಉಪಚರಿಸಿ, ಕೆಲವು ದಿವಸ ಇರಿಸಿ ಕೊಂಡು ಇದ್ದು, ಈ ಕಾಸಿರಾಯನು ತನ್ನ ಸೇನೆ ಸಹಿತ ಈ ದಾರಿದ್ರನಾಶಿರಾಯನೊಡನೆ ಈತನ ಪಟ್ಟಣಕ್ಕಂ ಬಂದು, ಈತನ ಕೈಯಲ್ಲಿ ಕಳುಹಿಸಿ ಕೊಂ

ಡು, ತಿರುಗಿ ಕಾಸಿ ಪಟ್ಟಣಕಂ ಬಂದು, ಸುಖದಲ್ಲು ಇದ್ದನು. ಇತ್ತ ಲಾರಾಯನು ತನ್ನ ಕುಮಾರ ಪ್ರಧಾನಿಯರ ಕೂಡೆ ಈ ವೃತ್ತಾಂತ ಮಂ ಪೇಳಿ, ಮಹಾ ಸಂತೋಷದಿಂದ ಮೊದಲಿನಿಂದ ವೆಗ್ಗಳವಾಗಿ ಅ ನ್ನದಾನಮಂ ಮಾಡಿ ಕೊಂಡು, ಸುಖದಲ್ಲಿ ಇರ್ದನು.

## ೨ನೇ ಕಥೆಯ ಮೂರನೇ ಭಾಗ.

ಈ ಕಥೆಯಂ ಕೇಳಿ, ಆ ತಾಮ್ರಚೂಡಂ ಮಹಾ ಮೃದುಚಿತ್ತನಾ ಗಿ ಆ ದ್ರವ್ಯಮಂ ವೆಚ್ಚಿಸಿ, ಅನ್ನದಾನ ಮೊದಲಾದ ದಾನಂಗಳಂ ಮಾ ಡುತ್ತಾ, ಅವರೀರ್ವರು ಯತೀಶ್ವರರು ಮಹಾ ಸಂತೋಷದಿಂದ ಇರು ತ್ತಿರಲು; ಅದರಿಂದ ನಾನು, ಇರುವದಕ್ಕೆ ಆಸ್ಪದವಿಲ್ಲದೆ, ಇಲ್ಲಿಗೆ ಬಂದೆ ನು; ಆ ದ್ರವ್ಯ ಹೋಗಿಯೂ, ಈ ಹೆಸರು ಬಿಡದು! ಎಂದು, ತನ್ನ ಮಿ ತ್ರರಾಗಿರುವ ಈ ಮೂವರ ಕೂಡೆ ಈ ಮೂಷಿಕರಾಜಂ ಹೇಳಲು;

ಆ ಮಿತ್ರರು ಈ ಹಿರಣ್ಯವರ್ಣನಂ ಸಂತವಿಟ್ಟು, ಪೂರ್ವದಲ್ಲು ಕಷ್ಟಂ ಬಟ್ಟವರಿದ್ಧಾರೆಂದು, ಆ ಕೂರ್ಮ ನು ಬಂದು ಕಥೆಯುಂ ಹೇಳಿದುದು; ಅದೆಂತೆನೆ—

## ೩ನೇ ಕಥೆಯ ಮೊದಲಿನ ಭಾಗ.

ಒಬ್ಬ ರಾಯನು ದುಃಖ ಸುಖಗಳೆನ್ನು ಅನುಭವಿಸಿದ್ದು.

ರಾಜಪುರವೆಂಬ ಪಟ್ಟಣದಲ್ಲು ರಾಜೇಂದ್ರಶೇಖರನೆಂಬ ರಾಯಂ ಮ ಣಿದರ್ಪಣೆಯೆಂಬ ಸತಿಯು ಧೂಮ್ರಪಾಲ ಶಂಖಪಾಲರೆಂಬ ಈರ್ವ ರು ಕುಮಾರರು ಧರ್ಮಜನೆಂಬ ಪ್ರಧಾನಂ ಸಹಿತ ಮಹಾ ಧರ್ಮ ದಿಂದ ರಾಜ್ಯವನಾಳುತ್ತಾ ಇರಲು; ಒಂದಾನೊಂದು ದಿವಸ ಆ ರಾ ಯನ ರಾಣಿಗೆ—ನಿನ್ನ ಗಂಡನು ಉಲ್ಲಂಘಿಸಿ, ಮಹಾ ಗರ್ವದಿಂದ ರಾ ಜ್ಯವನಾಳುತ್ತಾ ಇದ್ದನು; ಆತಂ ಇನ್ನು ಪ್ರಯಾಸಂ ಬಡುವನೆಂದು, ಸ್ವಪ್ನವಾಗಲು; ಆಕೆಯು ವಿಸ್ಮಯಂ ಬಟ್ಟು, ಈ ಸ್ವಪ್ನವಾ ರಾಯನ ಕೂಡೆ ಹೇಳ ಬಾರದು ಎಂದು, ತನ್ನೊಳು ಆಲೋಚಿಸಿ ಕೊಂಡು,

ಇಂತೆಂದಳು—ಶರತ್ಕಾಲದ ಮೇಘವೂ ಸ್ವಪ್ನದಲ್ಲಿ ಕಂಡ ಧನವೂ ಸತಿಯರ ಯೌವನವೂ ಅರಸುಗಳ ಕರುಣವೂ ಇವು ನಾಲ್ಕು ಮಿಂಚಿನ ಮರಿಯಾದೆ; ಇಂತೆಂಬ ನೀತಿಯುಂಟಾಗಿ ಈ ಸ್ವಪ್ನ ಅನಿಶ್ಚಯವೆಂದು, ಅರಸುಗಳ ಕೂಡೆ ಹೇಳ ಬಾರದು ಎಂದು, ಮತ್ತಿಂತೆಂದಳು—ಅರಸುಗಳು ನಗುತ್ತಲೇ ಮನುಷ್ಯರ ಕೆಡಿಸುವರು, ಸರ್ಪನು ನಾಲಿಗೆಯ ನೀಡುತ್ತಲೇ ಕೆಡಿಸುವದು, ಆನೆಯು ಶುಂಡಿಲದಿಂದ ಮುಟ್ಟಿ ಕೊಲ್ಲುವದು, ದುರ್ಜನನು ಕೊಂಡಾಡುತ್ತಲೇ ಒಕ್ಕಲ ಕೆಡಿಸುವನು; ಅದು ಕಾರಣ ಒಂದಾನೊಂದು ಸಲುಗೆಯಂ ಅರಸುಗಳ ಕೂಡೆ ಮಾತನಾಡ ಬಾರದೆಂದು, ಮತ್ತಿಂತೆಂದಳು—ಕೃಷಿ ಮಾಡುವಲ್ಲಿಯೂ ವಿದ್ಯೆ ಕಲಿಯುವಲ್ಲಿಯೂ ವ್ಯವಹಾರ ಮಾಡುವಲ್ಲಿಯೂ ನಾರಿಯರಲ್ಲಿಯೂ ಜತನದಿಂದ ಎಚ್ಚರಿಕೆಯಲ್ಲಿರ ಬೇಕು; ಇಂತೆಂಬ ನೀತಿಯನ್ನರಿತು, ಈ ಸ್ವಪ್ನ ರಾಯನ ಕೂಡೆ ಹೇಳ ಬಾರದು ಎಂದು, ಕೆಲವು ದಿವಸ ಸುಮ್ಮನಿರಲು; ತಿರಿಗಿ ಒಂದಾನೊಂದು ದಿವಸ ಅದೇ ಸ್ವಪ್ನವಾಗಲು; ಆಕೆಯು ವಿಸ್ಮಯಂ ಬಟ್ಟು, ಇನ್ನು ಹೇಳದೆ ಇರ ಬಾರದು! ಎಂದು, ರಾಯನ ಸಮೀಪಕ್ಕಂ ಬಂದು, ಈ ವಿವರಮಂ ಬಿನ್ನಹಂ ಮಾಡಲು; ರಾಯಂ ಬೆರಗಾಗಿ—ಸಾಲವ ತೆಗಿಯುವದೂ ಯಾಚಕತನ ಮಾಡುವದೂ ಸರ್ವರ ಕೈಯಲು ನನಿಸಿ ಕೊಂಬುದೂ ಮುಪ್ಪಿನಲ್ಲಿ ದರಿದ್ರನಾಗಿ ಇರುವದೂ ಇವು ಮಹಾ ಕಷ್ಟ; ಅದು ಕಾರಣ ಮುಪ್ಪಿನ ಕಾಲದಲ್ಲು ಪ್ರಯಾಸಂ ಬಡ ಬಾರದು; ಈಗಲೇ ಬಂದರೆ ಬರಲಿ! ಎಂದು, ಧೈರ್ಯಂ ಮಾಡಿ ಕೊಂಡು, ತನ್ನ ಸತಿಯ ಕೂಡೆ ಹೇಳಲು; ಕಷ್ಟಕಾಲಂ ಬಂದು, ರಾಜ್ಯದ ಬೆಳೆಯಂ ಕೆಡಿಸಿ, ರಾಜ್ಯದ ಪ್ರಜೆಗಳನ್ನೆಲ್ಲಾ ಖಾಲಿ ಮಾಡಿ, ದನಗಳಿಗೆಲ್ಲಾ ನಾನಾ ವ್ಯಾಧಿಯನಿಕ್ಕಿ, ಅರಮನೆಯ ಒಳಗಣ ಆನೆ ಕುದುರೆಯ ಶಾಲೆಗಳಿಗೆಲ್ಲಾ ಕಿಚ್ಚನಿಕ್ಕಿ, ಹಲವು ತರದಿಂದ ಆನೆ ಕುದುರೆ ರಾಜ್ಯ ದೇಶ ಬೊಕ್ಕಸ ಭಂಡಾರ ಮುಂತಾಗಿ ಎಲ್ಲವನ್ನು ನಜ್ಜುಗುಜ್ಜು ಮಾಡಿ, ಆ ರಾಯಂಗೆ ನಾನಾ ಪ್ರಕಾರದ ವ್ಯಾಧಿಯಂ ಹುಟ್ಟಿಸಿ, ಕಾಡಲಾಗಿ; ಈ ವಾರ್ತೆಯಂ ಹಿರಣ್ಯಪುರಮೆಂಬ ಪಟ್ಟಣದಲ್ಲು ಇಹ ಅಂಗಾರವರ್ಮನೆಂಬ

ರಾಯಂ ಕೇಳಿ—ಕಾಲ ವೊದಲು ಆ ರಾಯಗೂ ನನಗೂ ವೈರಂ; ಇದೀಗ ವೇಳ್ಯ; ಇಂಥಾ ವೇಳ್ಯದಲ್ಲು ಹಗೆಯ ಗೆಲ ಬೇಕು! ಎಂದು, ತನ್ನ ಸಕಲ ಸೈನ್ಯಮಂ ಕೂಡಿ ಕೊಂಡು, ಈ ರಾಯನ ಪಟ್ಟಣಕ್ಕೆ ಮುತ್ತಿಗೆಯಂ ಹಾಕಲು; ಆ ರಾಜೇಂದ್ರಶೇಖರನೆಂಬ ರಾಯಂ ತನ್ನೊಳು ಆಲೋಚಿಸಿ ಕೊಂಡು, ಈ ವಿಪತ್ತಿನ ಕಾಲದಲ್ಲಿ ಶತ್ರುವಿನ ಬಾಧೆಗೆ ಶಿಕ್ಕ ಬಾರದು ಎಂದು, ನಿಶ್ಚೈಯಿಸಿ, ತನ್ನ ಸತಿಯ ಇಬ್ಬರು ಕುಮಾರರು ಸಹಿತಾ ಕೂಡಿ ಕೊಂಡು, ರಾತ್ರೆಯಲ್ಲು ವಿಚ್ಛಿಂನನಾಗಿ ಹೊರವಂಟು, ಹೋಗಿ, ಮಹಾ ಭೀತಿಯಿಂದ ಆ ರಾಯನು ಆ ಶೀಮೆಯ ದಾಟಿ, ಶತ ಯೋಜನಾಂತರಮಂ ಹೋಗಿ, ಮೂಡಣ ಸಮುದ್ರದಲ್ಲು ಇಹ ಮಕರಂದಪುರಮೆಂಬ ಪಟ್ಟಣಕ್ಕಂ ಹೋಗಿ, ಒಂದು ದೇವಸ್ಥಾನದೊಳು ಇದ್ದು, ಯಾಚಕತನಮಂ ಮಾಡಿ ಕೊಂಡು, ಮಹಾ ವ್ಯಾಕುಲದಿಂದ ಚಿಂತಿಸುತ್ತಂ ಇರಲು; ಆ ರಾಣಿಯು ಕಂಡು, ಈ ವೇಳ್ಯದಲ್ಲು ತಾನು ಕಂಗೆಟ್ಟರೆ ರಾಯ ಎದೆಗೆಟ್ಟು ಸತ್ತಾನು ಎಂದು, ಮಹಾ ಧೈರ್ಯಮಂ ಮಾಡಿ ಕೊಂಡು, ತನ್ನ ಪತಿಯಂ ಸಂತೈಸಿದಳು, ಅದೆಂತೆನೆ—ದೇವಯತ್ನದಲ್ಲಿ ಯಾವದೊಂದು ಕಾರ್ಯವೂ ಆಗುವದಲ್ಲದೆ ಮನುಷ್ಯಯತ್ನದಲ್ಲಿ ಏನೂ ಆಗದು; ಹನ್ನೊಂದು ಕ್ಷೋಣೀ ಸೇನಾಧೀಶ್ವರನೆನಿಸಿದ ಕೌರವೇಶ್ವರನ ಐಶ್ವರ್ಯವು ಬಯಲಾಗಿ, ತಾನೊಬ್ಬನೇ ತನ್ನ ಗದೆಯಂ ಹೊತ್ತು ಕೊಂಡು, ರಣಭೂಮಿಯಲ್ಲು ಕಾಲುನಡೆಯಲ್ಲು ನಡದು ಹೋದನು; ಅದು ಕಾರಣ ದೇವಪ್ರಯತ್ನವ ಮೀರುವದಾದದೇ ಇಲ್ಲಾ; ನೀನಾವದಕ್ಕೂ ಚಿಂತಿಸ ಬೇಡಾ! ಎಂದು, ತನ್ನ ಪತಿಯಂ ಸಂತೈಸಿ ಇರಲಾಗಿ; ಆತಂ ಮಹಾ ಧೈರ್ಯವಂತನಾಗಿ, ಆ ಪುರದ ಒಳಗೆ ಕೂಲಿ ಕುಪ್ಪಸಿಯಂ ಮಾಡಿ ಕೊಂಡು, ಕೆಲವು ದಿವಸ ಇರಲು; ಒಂದು ದಿವಸ ಎಂದಿನಂತೆ ಆ ರಾಯನ ಸ್ತ್ರೀಯು ಆ ಪುರದ ಒಳಗೆ ಕೂಲಿ ಕುಪ್ಪಸಿಯಂ ಮಾಡುವದಕ್ಕೆ ಹೋಗಿ, ಅಲ್ಲಿ ರತ್ನಗರ್ಭನೆಂಬ ವ್ಯವಹಾರಿಯ ಮನೆಯ ಅಕ್ಕಿ ಭತ್ತವಂ ಕುಟ್ಟಿ ಕೊಟ್ಟು ಬರ ಬೇಕು ಎಂಬನಕದಾ ಆ ಸೆಟ್ಟಿಯ ಮನೆಯ ಬೋನಗಿತ್ತಿಗೆ ಮಹಾ ವ್ಯಾಧಿ ಹುಟ್ಟಿ, ಆಕೆಯು ಈ ಸ್ತ್ರೀಯ

ಕೂಡೆ, ಅಡಿಗೆಯ ಮಾಡಿ ಕೊಡು! ಎನಲು; ಈಕೆಯು ಅಡಿಗೆಯು ಮಾಡಿ ಕೊಡಲು; ಇವಳು ಅಡಿಗೆಯ ಮಾಡಿ ಕೊಟ್ಟದಕ್ಕೆ ನಾಲುಕು ಎಂಟು ಪಡಿ ಅಕ್ಕಿಯನ್ನು ಕೊಡಲು; ಆ ಸ್ತ್ರೀಯು ಮಹಾ ಸಂತೋಷದಿಂದ ಈ ದೇವಸ್ಥಾನಕ್ಕಂ ಬಂದು, ತನ್ನ ಪತಿಗೆ ಮಕ್ಕಳಿಗೆ ಸಹಾ ಅಡಿಗೆ ಮಾಡಿ, ಬಡಿಸಲು; ಅವರು ಉಂಡು, ಸುಖದಲ್ಲು ಇರಲು; ಇತ್ತಲಾ ಬೋನಗಿತ್ತಿಯು ಎಂದಿನಂತೆ ಆ ಹರದಗೆ ಇಕ್ಕಿ ಬಡಿಸಲು; ಆತನು ಊಟವ ಮಾಡಿ, ಷಡ್ರಸಾನ್ನಪಕ್ವವಾದ ಅನ್ನವಂ ಭುಂಜಿಸಿ, ಮಹಾ ಸಂತೋಷದಿಂದ, ಇಂದಿನ ಅಡಿಗೆಯ ಮಾಡಿದವರು ಯಾರು? ಎಂದು, ಕೇಳಲು; ನಮ್ಮ ಮನೇ ಅಕ್ಕಿ ಝಲ್ಲಿಸುವ ಕೂಲಿ ಹೆಂಗಸಿನ ಕೈಯ ಅಡಿಗೆಯಂ ಮಾಡಿಸಿದೆನು ಎನಲು; ಆಕೆ ನಾಳೆ ಬಂದರೆ ಬಿಡ ಬೇಡಾ! ಎಂದು, ತನ್ನ ಭೃತ್ಯನ ಕೂಡೆ ಹೇಳಿ, ಇರಲು; ಆ ಮರುದಿವಸ ಆ ಸ್ತ್ರೀಯು ಎಂದಿನಂತೆ ಎರಡು ಪಡಿ ಅಕ್ಕಿ ಬಾಹ ಕಕ್ಕುಲಿತೆಯಿಂದ ಆ ಹರದನ ಮನೆಗಂ ಬರಲು; ಆ ಹರದನು, ಈಕೆಯಂ ಇಲ್ಲಿಯೇ ಇರಿಸಿ ಕೊಂಡು ಇದ್ದರೆ ತುಬ್ಬಿಕೆ ಆದೀತು ಎಂದು, ಆ ರಾತ್ರೆಯಲ್ಲು ತಾನು ಮೊದಲು ಇರುವ ಹಿರಣ್ಯಾಪುರಮೆಂಬ ಪಟ್ಟಣಕಂ ಕಳುಹಲು; ಇತ್ತಲಾ ರಾಯಂ ಮಕ್ಕಳು ಸಹಿತ, ಈಕೆ ಬಾರದೆ ಇರಲು, ಚಿಂತಿಸಿ, ಶೋಕಮಂ ಗೈದು, ಆ ಪಟ್ಟಣದೊಳು ನಾಲ್ಕು ಎಂಟು ದಿವಸ ಅರಸಿ, ಕಾಣದೆ, ಮಹಾ ದುಃಖದಿಂದ ಆ ಪಟ್ಟಣವಂ ಬಿಟ್ಟು, ಸಕಲ ದೇಶಂಗಳಂ ತಿರುಗಿ, ನಾನಾ ತೀರ್ಥಂಗಳಂ ನೋಡುತ್ತಾ, ಈ ಹಿರಣ್ಯಾಪುರಮೆಂಬ ಪಟ್ಟಣಕಂ ಬಂದು, ಅಲ್ಲಿ ಒಂದು ಗುಡಿಯೊಳು ವಾಸಂ ಮಾಡಿ ಕೊಂಡು, ಕೂಲಿ ಕುಪ್ಪಸಿಯಂ ಮಾಡಿ ಕೊಂಡು, ಕಟ್ಟಿಗೆಯಂ ಹೊತ್ತು, ಮಾರಿ ಕೊಂಡು, ಕೆಲವು ದಿವಸ ಇರಲು; ಆ ರಾಯಂ ಎಂದಿನಂತೆ ಕಟ್ಟಿಗೇ ಹೊರೆಗಂ ಹೋಗಿ, ಹೊರೆಯಂ ಹೊತ್ತು ಕೊಂಡು ಬರುತ್ತಾ, ದಾರಿಯಲ್ಲು ಮಹಾ ಧೂಪಿಸಿ, ಊರ ಮುಂದು ಗಡೆಯಲ್ಲು ಹೊರೆಯಂ ಇಳುಹಿ, ತಾನು ಬಳಲಿ, ಮಲಗಿ, ಇರಲಾಗಿ; ಆ ಪಟ್ಟಣದ ರಾಯಂ ಮೃತನಾಗಿ, ಸುತರು ಇಲ್ಲದೆ ಇರಲು; ಸಮಸ್ತ ದಾಯಾದ್ಯರು ಎಲ್ಲಾ, ನನಗೆ ತನಗೆ ಪಟ್ಟವ ಕಟ್ಟ ಬೇಕು! ಎಂದು,

ಗುದ್ದ್ಯಾಡುತ್ತಾ ಇರಲು; ಆ ಪ್ರಧಾನಂ ಒಂದು ಬುದ್ಧಿಯಂ ಯೋಚಿಸಿ, ಇದಕೆ ತಕ್ಕ ಉಪಾಯಮಂ ಕಾಣ ಬೇಕು ಎಂದು, ಅವರೆಲ್ಲರ ವಾದಮಂ ನಿಲ್ಲಿಸಿ, ಪಟ್ಟದ ಆನೆಯಂ ಅರ್ಚಿಸಿ ಬಿಡಲು; ಆ ಗಜವು ಊರ ಹೊರಯಿಂಕೆ ಬಂದು, ಕಟ್ಟೆಗೇ ಹೊರೆಯನ್ನು ಇರಿಸಿ ಕೊಂಡು ಮಲಗಿ ಇದ್ದ ಈ ರಾಜೇಂದ್ರಶೇಖರನೆಂಬ ರಾಯನ ಕೊರಳಿಗೆ ಪೂಮಾಲೆಯ ಹಾಕಿ, ತನ್ನ ಬೆನ್ನ ಮೇಲೆ ಇರಿಸಿ ಕೊಂಡು, ಹೋಗಿ, ಸಿಂಹಾಸನದ ಮೇಲೆ ಕುಳ್ಳಿರಿಸಲಾಗಿ; ಪ್ರಧಾನಂ ಆ ರಾಯಂಗೆ ಪಟ್ಟಾಭಿಷೇಕವ ಮಾಡಿಸಲು; ಸಕಲ ಪ್ರಜೆ ಪರಿವಾರವೆಲ್ಲಾ ಕಾಣಿಕೆಯನಿಕ್ಕಿ, ಕಾಣಲು; ರಾಯಂ ಮಹದೈಶ್ವರ್ಯದಿಂದ ಪೃಥ್ವಿಪತಿಯಾಗಿ, ಮಹದೈಶ್ವರ್ಯದಿಂದ ರಾಜ್ಯವನಾಳುತ್ತಾ, ತನ್ನ ಮಕ್ಕಳ ಹಂಬಲಂ ಮರದು, ಸುಖದಿಂದ ಇರುತ್ತಾ ಇರಲು; ಇತ್ತಲಾ ಕುಮಾರರು, ತಂದೆ ಬರಲಿಲ್ಲ ಎಂದು, ಹುಡುಕಿ, ಕಾಣದೆ, ಮಹಾ ಶೋಕಂ ಗೈದು, ಆ ಪುರದೊಳು ನಾಲ್ಕು ದಿವಸ ಅರಸಿ, ಕಾಣದೆ, ಮಹಾ ವ್ಯಾಕುಲದಿಂದ—ತಾಯಿಯು ಹೋದಳು, ತಂದೆಯು ಹೋದನು; ತಮಗೆ ಇನ್ನೇತರ ಜಲ್ಮವೆಂದು, ಮರುಗಿ, ಆ ಪುರದ ಮುಂದೆ ಮಹಾ ಪ್ರವಾಹವಾಗಿ ಹರಿವ ನದಿಯಂ ಬೀಳಲಾಗಿ; ಅದನ್ನು ಒಬ್ಬ ಹಾವಡಿಗಂ ಕಂಡು, ಬಂದು, ಇವರಿಬ್ಬರನ್ನು ಕಡೆಗೆ ತೆಗೆಯಲು; ಆ ಮೇಲೆ ಇವನು, ಇದೇನು? ಎಂದು, ಬೆಸಗೊಳಲಾಗಿ; ಈ ಕುಮಾರರು ತಮ್ಮ ಪೂರ್ವಾಪರಮಂ ಹೇಳಲು; ಆ ಹಾವಡಿಗಂ ಮಹಾ ಕರುಣದಿಂದ—ತನಗೆ ಯಾರೂ ಮಕ್ಕಳಿಲ್ಲ, ನೀವೇ ಮಕ್ಕಳು! ಎಂದು ಅವರಿಬ್ಬರನ್ನು ಕರದೊಯ್ದು, ಅತ್ಯಂತ ಪ್ರೇಮದಿಂದ ಸಲಹಿ, ನಾನಾ ವಿದ್ಯಂಗಳಂ ಕಲಿಸಿ, ಕೂಡಿ ಕೊಂಡು ಇರಲು; ಒಂದು ದಿವಸ ಆ ಪಟ್ಟಣದ ರಾಯಂ ಬೇಟೆಯ ಹೋಗಲು; ಇವರಿಬ್ಬರು ರಾಯನ ಸಂಗಡ ಅರ್ಥಿಯ ನೋಡುವದಕ್ಕೆ ಹೋಗಲಾಗಿ; ಅಲ್ಲಿ ನಾನಾ ಮೃಗಗಳಂ ಎಚ್ಚು, ಕಡಿದು, ಇರಿದು, ಕ್ರೂರ ಮೃಗವಾದ ಸಿಂಹ ಶರಭ ಶಾರ್ದೂಲಂಗಳಂ ಸಂಹರಿಸಿ, ಆ ಕುಮಾರರು ಮಹಾ ಸಾಹಸವಂ ಮಾಡಲು; ರಾಯಂ ಕಂಡು, ಮಹಾ ಚೋದ್ಯಮಂ ಬಟ್ಟು, ಇವರ ಕರದು, ನಮ್ಮಲ್ಲಿ ಇದ್ಧೀರೇ? ಎಂದು, ಕೇಳಲು; ನಮಗೆ ದಿನ

ಒಂದಕ್ಕೆ ಸಾವಿರ ಹೊನ್ನಂ ಕೊಟ್ಟರೆ ಇದ್ದೇವು ಎನಲು; ಆ ರಾಯಂ ತನ್ನೊಳು ಆಲೋಚಿಸಿ ಕೊಂಡು—ದ್ರವ್ಯಮಂ ಘಳಿಸ ಬಹುದು, ಇಂಥಾ ಹಿತತ್ವವುಳ್ಳ ಬಂಟರನ್ನು ಘಳಿಸುವದು ದುರ್ಲಭವೆಂದು, ಅವರು ಹೇಳಿದಷ್ಟು ವಿತ್ತಮಂ ಕೊಟ್ಟು, ಸಂಗಡ ಕರಕೊಂಡು ಬಂದು, ತೇಜಮಾನದಿಂದ ಕೆಲವು ಕಾಲ ಕೂಡಿ ಕೊಂಡು ಇರಲು; ಒಂದು ದಿವಸಂ ರಾಯನ ಬಳಿಗೆ ಪ್ರಧಾನಿಯು ಬಂದು ದೇವರು ರಾಜ್ಯದ ಪಾರುಪತ್ಯಮಂ ನೋಡ ಬೇಕು ಎನಲು; ರಾಯಂ ಕರಣೀಕರಂ ಕರಿಸಿ, ಲೆಖ್ಖವ ಕೇಳುತ ಇರಲು; ರಾಯನ ಮುಂದೆ, ಈ ಊರ ರತ್ನಗರ್ಭನೆಂಬ ಹರದನ ಮೇಲೆ ಅರಮನೇ ಹಣ ಹತ್ತೆಂಟು ಲಕ್ಷ ದ್ರವ್ಯವು ನಿಲವು ಆಗಿ ಅದೆ ಎಂದು, ಹೇಳಲು; ರಾಯಂ ಮಹಾ ಕೋಪಿಸಿ ಕೊಂಡು, ಆ ಹರದನಂ ಕರೇ ಕಳುಹಿಸಲು; ಆತಂ ವ್ಯವಹಾರಕ್ಕೆ ಹೋಗಿ ಹತ್ತೆಂಟು ವರುಷವಾಯಿತು, ಇನ್ನು ಬರಲಿಲ್ಲಾ ಎನಲು; ರಾಯಂ ಮಹಾ ಕೋಪಿಸಿ ಕೊಂಡು, ಆ ಹರದನ ಮನೆಗೆ ಕಾವಲಂ ಹಾಕಲು; ಅವರಿಗೆಲ್ಲಾ ಸರ್ತಿಯ ಮಾಡಿ ಕೊಡಲು; ಆ ರೀತಿ ಕಾಯ್ವುತಂ ಇರಲು; ಒಂದು ದಿವಸ ಇವರಿಬ್ಬರು ಕುಮಾರರ ಸರ್ತಿ ಬರಲು; ಇವರಿಬ್ಬರು ಕಾದು ಕೊಂಡು ಇರಲು; ರಾತ್ರೆಯಲ್ಲು ಪಾಹರೆಯಂ ತಿರುಗುತ್ತಾ ಬರಲಾಗಿ, ಈ ತಮ್ಮಗೆ ನಿದ್ರೆ ತೂಕಡಿಸಿರಲು; ಸೈರಿಸಲಾರದೆ, ಇರಿಸಲಾರದೆ—ಎಲೇ ಅಣ್ಣಾ, ನಿದ್ರೆ ಬರುತ್ತದೆ; ಒಂದಿಷ್ಟು ನಿದ್ರೆಯ ಮಾಡಲೇ? ಎಂದು, ಕೇಳಲು; ಇದು ಸಮಸ್ತ ಪರಿವಾರ ಕಾಯುವಂಥ ಕಾವಲು; ನಾವು ಇಬ್ಬರೇ ಕಾಯುತ್ತ ಇದ್ಧೇವೆ; ನೀನು ಮಲಗ ಬೇಡ! ಎನಲು; ಒಂದಾ ಹೊತ್ತು ಹೋಗುವ ಹಾಗೆ ಒಂದು ಕಥೆಯನ್ನಾದರೂ ಹೇಳು! ಎನಲು; ಈತನು, ತಮ್ಮ ಬದುಕೇ ಕಥೆಯಾಗಿ ಅದೆ; ಎಂದು, ಹೇಳಲು; ಆ ಬದುಕಿನ ಕಥೆಯನ್ನಾದರೂ ಹೇಳು! ಎನಲು; ಈತನು ತಮ್ಮ ಪೂರ್ವ ವೃತ್ತಾಂತಮಂ ವಿವರಿಸಿ ಹೇಳಲಾಗಿ; ಆ ರತ್ನಗರ್ಭನ ಮನೆಯ ಒಳಗೆ ಇರುವ, ಆತ ಓಡಿಸಿ ಕಳುಹಿದ ಸತಿಯು ಒಳಗೆ ಇರಲು; ಇವನು ಹೇಳಿದ ವಿವರಮಂ ಕೇಳಿ, ಬಂದು, ಇನ್ನೊಮ್ಮೆ ಹೇಳಿ! ಎನಲು; ಇವರು ತಮ್ಮ ಪೂರ್ವ ವೃತ್ತಾಂತಮಂ ಹೇಳಲಾಗಿ;

ಆ ಸ್ತ್ರೀಯು, ಇವರು ತನ್ನ ಮಕ್ಕಳು ಎಂದು, ತಿಳಿದು, ಮಹಾ ನೊಂದು ಕೊಂಡು, ಚಿಂತೆಯಿಂದ ಸರ್ವೇಶ್ವರನ ಬೇಡಿ ಕೊಳುತ್ತಂ ಇರಲು; ಇತ್ತಲು ಸೂರ್ಯೋದಯವಾಗಲು; ಈ ಅರಸನ ಪರಿವಾರವೆಲ್ಲಾ ಒಂದಾಗಿ—ಇವರಿಬ್ಬರು ದಿನಕ್ಕೆ ಸಾವಿರ ಹೊನ್ನ ಸಂಬಳವ ತೆಗದು ಕೊಳುತ್ತಾರೆ, ತಮಗೆ ಏನೂ ಇಲ್ಲಾ ಎಂದು, ನಾನಾ ತೆರದಿಂದ ಇವರ ಕೊಲ್ಲಿಸ ಬೇಕು ಎಂದು, ಪರಿವಾರವೆಲ್ಲವೊಂದಾಗಿ, ಬೇಹ ಇಟ್ಟರಲಾಗಿ; ಆ ಬೇಹಿನವರು ಇವರಿಬ್ಬರು ರಾತ್ರೆಯಲ್ಲು ಆ ಸತಿಯೊಡನೆ ಮಾತನಾಡುವದಂ ಕೇಳಿ, ಬಂದು, ರಾಯನ ಕೂಡೆ—ಆ ಸೆಟ್ಟಿಯ ಮನೆಗೆ ಒಳ್ಳೆಯವರೆಂದು ಅಪ್ಪಂಥವರು ಕಾವಲ ಇಟ್ಟು ಇದ್ಧಾರೆ, ಅವರು ಒಳಗಿದ್ದ ಸತಿಯ ಕೂಡೆ ಮಾತನಾಡುತ್ತಾ ಇದ್ದರು ಎಂದು, ಚಾಡಿಯಂ ಹೇಳಲಾಗಿ; ರಾಯಂ ಮಹಾ ಕೋಪಿಸಿ ಕೊಂಡು, ಪ್ರಧಾನಿಯಂ ಕರಸಿ, ಅವರಿಬ್ಬರಿಗೂ ಆಗ್ಞೆಯ ಮಾಡಿಸು! ಎನಲು; ಅವರಿಬ್ಬರನ್ನು ಪ್ರಧಾನಿಯು ಕರದು, ಕೋಪಿಸಿ ಕೊಂಡು, ಆಗ್ಞೆಯಂ ಮಾಡಿಸಿ! ಎಂದು, ಕಟ್ಟು ಮಾಡಿಸಲಾಗಿ; ಅವರು—ಎಲೇ ಪ್ರಧಾನಿಯೇ, ನಾವು ಮಾಡಿದ ಅಪರಾಧವೇನು? ಎನಲು; ಪ್ರಧಾನಂ ಕೋಪಿಸಿ ಕೊಳ್ಳಲು; ವಿಚಾರವಿಲ್ಲದೆ ಆಗ್ಞೆಯ ಮಾಡೆಂದು ಹೇಳ ಬಹುದೇ? ಪೂರ್ವದಲ್ಲು ಒಬ್ಬ ಪ್ರಧಾನಿಯಿಂದ ಅರಸು ರಾಜ್ಯವೆಲ್ಲಾ ಉಳಿಯಿತು ಎಂಬುದನರಿಯೆಯಾ? ಎನಲು; ಅದು ಹ್ಯಾಗೆ? ಎಂದು, ಕೇಳಲಾಗಿ; ಅವರಿಬ್ಬರು ಒಂದು ಕಥೆಯಂ ಹೇಳಿದರು; ಅದೆಂತೆನೆ—

## ೬ನೇ ಕಥೆ.

ಪ್ರಧಾನಿಯಿಂದ ಅರಸನೂ ರಾಜ್ಯವೂ ಉಳಿದದ್ದು.

ಮಲಯಾಚಲವೆಂಬ ಪಟ್ಟಣದಲ್ಲು ಧರ್ಮಪಾಲನೆಂಬ ರಾಯಂ ಕೈರವನೇತ್ರಿಯೆಂಬ ಸತಿಯು ಸುಮತಿಯೆಂಬ ಪ್ರಧಾನ ಸಹಾ ಸುಖದಿಂದ ರಾಜ್ಯವನಾಳುತ್ತಂ ಇರಲು; ಒಂದಾನೊಂದು ದಿವಸಂ ಆ ರಾಯಂ ತನ್ನ ಸಕಲ ಸೇನೆಯಂ ಕೂಡಿ ಕೊಂಡು, ವನಾಂತರಕ್ಕೆ ಬೇಟೆಯಂ ಹೋಗಲು; ಅನೇಕ ಮೃಗತತಿಗಳಂ ಕೊಂದು, ಒಂದು ವ್ಯಾ

ಘ್ರುನಂ ಹಿಂದಟ್ಟಿ ಕೊಂಡು, ನಾಲ್ಕೆಂಟು ಯೋಜನಾಂತರವಮಂ ಅಟ್ಟಿ ಕೊಂಡು ಹೋಗಿ, ಆ ಹುಲಿಯಂ ಕೆಡಹಿ, ರಾಯಂ ಧೂಪಿಸಿ ನಿಲ್ಲಲು; ಆ ರಾಯನು ಏರುವ ಮನೋವೇಗವೆಂಬ ಕುದುರೆಯೂ ಮಹಾ ಬ ಳಲಿ, ಧೂಪಿಸಿ, ನಿಲ್ಲಲು; ರಾಯಂ ಕಾಲುನಡೆಯಿಂದ ಕೆಲವು ದೂರ ನಡದು ಹೋಗಿ, ಒಂದು ದೇವಸ್ಥಾನಮಂ ಕಾಣಲು; ಮಹಾ ಹರು ಷಿತನಾಗಿ, ಆ ದೇವಸ್ಥಾನಕ್ಕೆ ಬಂದು, ಮಲಗಿ, ಇರಲು; ಆ ರಾತ್ರೆಯ ಲ್ಲಿ ಓರ್ವ ಮಹಾ ಕ್ರೂರ ಖಳಂ ಬಂದು, ರಾಯನಂ ತನ್ನ ಗುಹೆಗಂ ಒಯಿದು, ಕಟ್ಟಿ, ಹಾಕಲು; ಇತ್ತಲಾ ಪ್ರಧಾನಂ ಸಕಲ ಸೇನೆಯಲ್ಲಿ ರಾಯನಂ ಕಾಣದೆ, ಮಹಾ ವ್ಯಾಕುಲದಿಂದ—ಅರಸು ಇಲ್ಲದೆ ಹೋ ದರೆ, ಪ್ರಧಾನಿಯೇ ರಾಯನ ಕೊಂದು ಬಂದನು ಎಂಬ ಅಪಕೀರ್ತಿ ಹೊದ್ದುವದು; ಅದು ಅಲ್ಲದೆ ರಾಯಗೆ ಮಕ್ಕಳು ಇಲ್ಲ, ಸಮಸ್ತ ದಾ ಯಾದ್ಯರು ಕೊಂದಾಡಿ, ರಾಜ್ಯ ಕೆಟ್ಟು ಹೋದೀತು ಎಂದು, ಅರಿತು, ಒಂದು ಉಪಾಯವಮಂ ಯೋಚಿಸಿ ಕೊಂಡು, ಪಲ್ಲಕಿಯಂ ತರಸಿ, ಅ ರಸು ಮಹಾ ಬಳಲಿ ಇದ್ದಾನೆಂದು ಸುದ್ದಿಯಂ ಹುಟ್ಟಿಸಿ, ಆ ಪಲ್ಲಕಿ ಯನ್ನು ಮುಂದಿಟ್ಟು ಕೊಂಡು, ಪ್ರಧಾನಂ ಪಟ್ಟಣಕಂ ಬಂದು, ಸಮ ಸ್ತ ಪ್ರಜೆ ಪರಿವಾರದ ಕೂಡೆ, ರಾಯನು ಮಹಾ ಧೂಪಿಸಿ ಮಲಗಿ ಇ ದ್ದಾನೆ ಎಂದು, ಹೇಳಿ, ಎಲ್ಲರಂ ಕಳುಹಿ, ಆ ಪಲ್ಲಕಿಯನ್ನು, ರಾಯನ ಪಟ್ಟದರಸಿಯ ಮನೆಯಲ್ಲಿ ಇರಿಸಿ, ಈ ವೃತ್ತಾಂತಮಂ ಆಕೆಯ ಕೂ ಡ ಏಕಾಂತದಿಂ ಹೇಳಿ, ಪಲ್ಲಕಿಯನ್ನು ಮತ್ತಾರೂ ನೋಡದಂತೆ ಕ ಟ್ಟು ಮಾಡಿಸಿ ಕೊಟ್ಟು, ತನ್ನ ಮನೆಗೆ ಹೋಗಲು; ಮರುದಿವಸ ಸೂ ರ್ಯೋದಯವಾಗಲು, ತಿರುಗಿ ಅರಸು ಬೇಟೆಗೆ ಹೋಗುತ್ತಾನೆಂ ದು, ಸುದ್ದಿಯಂ ಹುಟ್ಟಿಸಿ, ಆ ಪ್ರಧಾನಂ ಆ ಪಲ್ಲಕಿಯಂ ಹೊರಿಸಿ ಕೊಂಡು, ಮತ್ತಾ ವನಾಂತರಕ್ಕಂ ಹೋಗಿ, ಒಂದು ಪರ್ವತದ ತೊ ಪ್ಪಲಲ್ಲಿ ಈ ಪಲ್ಲಕಿಯನಿರಿಸಿ, ತನ್ನ ವಿಶ್ವಾಸಿಗಳ ಕಾವಲಂ ಇರಿಸಿ, ನಾ ಲ್ವರು ಹಿತವಾದವರಂ ತನ್ನ ಸಂಗಡ ಕೂಡಿ ಕೊಂಡು ಹುಡುಕುತ್ತಾ, ರಾಯನಿರ್ದ ಗುಹೆಯಂ ಕಂಡು, ಅಲ್ಲಿಗೆ ಬರಲು, ಈ ರಾಯನು ಅಲ್ಲಿ ಇರ್ದುದಂ ತಿಳಿದು, ಕರೆಯಲು, ಆ ಖಳಂ ತನ್ನ ಪರಿವಾರಮಂ ಕೂಡಿ

ಕೊಂಡು ಹೊರಗೆ ಬರಲು; ಈ ಪ್ರಧಾನಂ—ತನಗೆ ಇನ್ನೇತರ ಜನ್ಮ? ತಾನು ರಾಯನ ಸಂಗಡ ಸಾಯುತ್ತೇನೆಂದು ನಿಶ್ಚೈಸಿ, ಆ ಖಳನ ಸಂಗಡ ಯುದ್ಧಮಂ ಗೈಯಲಾಗಿ; ಆ ಖಳಂ ವಿಸ್ಮಯಂ ಬಟ್ಟು, ಬೆರಗಾಗಿ, ಇಂಥಾ ಧೈರ್ಯವಂತನ ಕೊಲ್ಲ ಬಾರದು ಎಂದು, ಹಿರಿದು ಮೆಚ್ಚಿ, ರಾಯನ ಕೊಲ್ಲದುಳಿಸಿ, ಈರ್ವರಂ ಕಳುಹಲು; ಆ ರಾಯನು ಪ್ರಧಾನಿಯಂ ತಕ್ಕೈಸಿ ಕೊಂಡು ಮಹಾ ಹರುಷದಿಂದ ತನ್ನ ಪಟ್ಟಣಕಂ ಬಂದು, ಸುಖದಲ್ಲು ಇದ್ದನು.

## ೫ನೇ ಕಥೆಯ ಎರಡನೇ ಭಾಗ.

ಅದು ಕಾರಣದಿಂದ ನೀನು ಧರ್ಮದಿಂದ ವಿಚಾರಿಸ ಬೇಕು! ಎಂದು, ಇವರಿಬ್ಬರು ಈ ಪ್ರಧಾನನ ಕೂಡೆ ಈ ಕಥೆಯಂ ಹೇಳಲು; ಆ ಪ್ರಧಾನಂ ಕೇಳಿ, ಮಹಾ ಸಂತೋಷಮಂ ಬಟ್ಟು, ಇವರಿಬ್ಬರನ್ನು ಅರಸಿನ ಸಮಿಾಪಕ್ಕಂ ಕರದೊಯ್ದು, ನಿಲ್ಲಿಸಿ—ಇವರಿಬ್ಬರನ್ನು ಆಜ್ಞೆಯ ಮಾಡಿಸ ಹೇಳಿ, ನಿರೂಪವ ಪಾಲಿಸಿ ಇದ್ದಿರಿ; ಇವರಿಬ್ಬರು ಮಾಡಿದ ಅಪರಾಧವೇನೆಂದು ವಿಚಾರಿಸ ಬೇಕು! ಎಂದು, ಬಿನ್ನೈಸಲು; ಆ ರಾಯನು—ಇದೇನು? ನಿನ್ನೆ ರಾತ್ರಿಯಲ್ಲು ನೀವು ಆ ಹರದನ ಮನೆಯ ಕಾದು ಇದ್ದಲ್ಲಿ ಮಾಡಿದ ಅನರ್ಥಮಂ ಹೇಳಿ! ಎನಲು; ರಾಯಂಗೆ ಅವರಿಬ್ಬರು ವಂದನೆಯಂ ಮಾಡಿ—ದೇವರು ತಮ್ಮ ಬಿನ್ನಪವ ಕೇಳಿ! ಆ ಹರದನ ಮನೆಯಲ್ಲು ನಿನ್ನೆ ರಾತ್ರೆ ಕಾವಲು ಇಟ್ಟಲ್ಲಿ ನನ್ನ ತಮ್ಮನು, ನಿದ್ರೆ ಬರುತ್ತದೆ, ಒಂದು ಕಥೆಯ ಹೇಳು ಎನಲು, ಇನ್ನೇತರ ಕಥೆ? ನಮ್ಮ ಬದುಕೇ ಕಥೆಯಲ್ಲವೇ? ಎನಲು; ಆ ಬದುಕಿನ ಕಥೆಯನ್ನಾದರೂ ಹೇಳು ಎನಲು; ನಾನು ಮಹಾ ಚಿಂತೆಯಿಂದ ನಮ್ಮ ಹಿಂದಣ ಸ್ಥಿತಿಯನ್ನು ಕಥೆಯ ಮಾಡಿ ಹೇಳಿದೆನು ಎನಲು; ಆ ರಾಯನು, ಅದು ಹ್ಯಾಗೆ? ಎಂದು, ಕೇಳಲಾಗಿ; ಆ ಕುಮಾರ ಇಂತೆಂದಂ—

ರಾಜಪುರಮೆಂಬ ಪಟ್ಟಣದಲ್ಲು ರಾಜೇಂದ್ರಶೇಖರನೆಂಬ ರಾಯಂ ಮಣಿದರ್ಪಣಿಯೆಂಬ ಸತಿಯು ಧೂಮ್ರಪಾಲನೆಂಬ ಶಂಖಪಾಲನೆಂಬ ನಾವು ಇಬ್ಬರು ಕುಮಾರರು ಸಹಾ ರಾಜ್ಯವನ್ನಾಳುತ್ತಾ ಇರಲು;

ಕಷ್ಟಕಾಲಂ ರಾಯನ ಕಾಡಲಾಗಿ, ಮಹಾ ಕ್ಷಾಮ ಡಾಮರದ ಅ
ದ್ಭುತಂಗಳು ಆಗಲು; ಪರ ಚಕ್ರವರ್ತಿಯು ಕೇಳಿ, ಮುತ್ತಿಗೆಯಂ ಹಾ
ಕಲು; ರಾಯಂ ಕಂಗೆಟ್ಟು, ಮುರಿದು, ಬಂದು, ಮಕರಂದಪುರವೆಂಬ
ಪಟ್ಟಣವಂ ಶೇರಲು; ಅಲ್ಲಿ ನಮ್ಮ ತಾಯಿಯು ಹೋಗಲು; ಅಲ್ಲಿಂದ
ಈ ಹಿರಣ್ಯಪುರಕಂ ಬಂದೆವು; ಇಲ್ಲಿ ನಮ್ಮ ತಂದೆಯು ಹೋಗಲು;
ಆ ದುಃಖದಿಂದ ನಾವು ಇಬ್ಬರು ಹೊಳೆಯಂ ಬೀಳಲಾಗಿ; ಅಲ್ಲಿ ಒಬ್ಬ
ಹಾವಡಿಗಂ ಕಂಡು, ತೆಗದು, ಸಾಕಿದನು, ನಾನಾ ವಿದ್ಯಂಗಳಂ ಕಲಿ
ಸಿದನು; ಆ ಮೇಲೆ ದೇವರ ಓಲೈಸಿದೆವು, ದೇವರು ಪಹರೆಯ ಕಾವಲ
ಕೊಟ್ಟರಿ; ಪರಸೇವೆಯೆಂಬದು ಮಹಾ ಕಷ್ಟ; ಈ ರಾತ್ರೆಯಲ್ಲು ಮಲ
ಗ ಬೇಡ, ಜತನವಾಗಿ ಕಾದಿರ ಬೇಕು! ಎಂದು, ನಾನು ನನ್ನ ತಮ್ಮನ
ಕೂಡೆ ನಮ್ಮ ಬದುಕಿನ ವಿವರಂ ಹೇಳಿದೆನು; ಆ ವ್ಯವಹಾರಿಯ ಮ
ನೆಯಲ್ಲು ಇದ್ದ ಒಬ್ಬ ಸ್ತ್ರೀಯು, ಇನ್ನೊಮ್ಮೆ ಈ ಪ್ರಸಂಗಮಂ ಹೇಳೆನ
ಲು; ಮತ್ತೊಂದು ಸಾರಿ ಅದಂ ವಿವರವಾಗಿ ಹೇಳಿದೆನು; ಇದೀಗ
ನಾವು ಮಾಡಿದ ಅಪರಾಧವೆನಲು;

ರಾಯಂ ಮಹಾ ದುಃಖಂ ಗೈದು, ಇವರು ತನ್ನ ಮಕ್ಕಳೆಂದು,
ಅರಿತು, ಆ ವ್ಯವಹಾರಿಯ ಮನೆಯಲ್ಲು ಇದ್ದಾಕೆ ತನ್ನ ಸ್ತ್ರೀಯೆಂದು,
ಅರಿತು, ಆಕೆಯಂ ಕರಿಸಿ, ಪೂರ್ವ ವೃತ್ತಾಂತಮಂ ಕೇಳಲು, ಆಕೆಯು
ಇದೇ ರೀತಿಯಲ್ಲು ಹೇಳಲು; ರಾಯಂ ಮಹಾ ನೊಂದು ಕೊಂಡು—
ಐಶ್ವರ್ಯಮದದಿಂದ ಮುಂದುಗಾಣದೆ, ಈ ತೆರನಲ್ಲು ಮರೆದೆನು! ಎಂ
ದು, ತನ್ನ ಸತಿ ಸುತರಂ ಸಂತೈಸಿ ಕೊಂಡು, ಮಹಾ ದುಃಖಂಗೊಳ
ಲು; ಈ ಪ್ರಧಾನಂ ರಾಯನಂ ಸಂತೈಸಿ, ಈತನು ಈ ಸತಿಯಂ ಪುನರ್
ವಿವಾಹಮಂ ಮಾಡಿ ಕೊಂಡು, ಕುಮಾರರಿಗೆ ಅರ್ಧ ರಾಜ್ಯಮಂ
ಕೊಟ್ಟು, ಆ ಹರದನ ಕರಸಿ, ಆತಗೆ ತಕ್ಕ ಆಜ್ಞೆಯಂ ಮಾಡಿಸಿ, ಆ
ಹಾವಡಿಗಗೆ ಸಪ್ತಾಂಗಮಂ ಕೊಟ್ಟು, ತಾವು ಸುಖದಿಂದ ರಾಜ್ಯವ
ನಾಳುತ್ತಾ ಇದ್ದರು.

ಅದು ಕಾರಣ ಇಂಥಾ ರಾಯರು ಎಲ್ಲಾ ದುಃಖವ
ನನುಭವಿಸಿದರು; ನೀನು ದುಃಖಂಗೊಳ ಬೇಡಾ! ದೇವ

ಚಿತ್ತವನ್ನಾರೂ ಮೀರುವವರಿಲ್ಲ! ಎಂದು, ಈ ಕಥೆಯಂ ಕೂರ್ಮನು ಹೇಳಿ, ಮೂಷಿಕನಂ ಸಂತೈಸಿ, ಈ ಪ್ರಕಾರದಿಂದ ಮೂಷಿಕ ಎರಳೆ ಕೂರ್ಮ ವಾಯಸ ಸಹಾ ಎಲ್ಲರು ಸುಖರಾಗಿ ಇರುತ್ತಿರಲು;

ಬಂದಾನೊಂದು ದಿವಸ ಈ ಕೂರ್ಮನು ಆಹಾರಾರ್ಥವಾಗಿ ಹೋಗಿ, ಒಂದು ನದಿಯ ತೀರದಲ್ಲು ಒಬ್ಬ ಬೇಟೆಗಾರನ ಬಲೆಯೊಳಗೆ ಶಿಕ್ಕಿ, ಸಂಕಟಗೊಳುತ್ತಾ ಇರಲಾಗಿ; ಇತ್ತಲು, ಮಧ್ಯಾಹ್ನಕ್ಕೆ ಕೂರ್ಮ ಬಾರದೆ ಇರಲು, ಇವರು ಮಹಾ ಚಿಂತೆಯಿಂದ ವಾಯಸನಂ ಕರದು, ನೀನು ಹೋಗಿ ಬಾ ಎನಲು; ಆ ವಾಯಸಂ ನೋಡುತ್ತಾ ಬರಲು; ಈ ನದಿಯ ತೀರದಲ್ಲು ಬಲೆಯೊಳಗೆ ಸಿಕ್ಕಿರ್ದ ಈ ಕೂರ್ಮನಂ ಕಂಡು, ಬಹು ಸಂಕಟಂಗೊಂಡು, ನೀನು ಅಂಜ ಬೇಡಾ! ಎಂದು, ಅತಿ ಧೈರ್ಯವಂ ಪೇಳಿ, ಘನವೇಗದಿಂದ ಹೋಗಿ, ಆ ಮೂಷಿಕಗೆ ಹೇಳಲು; ಆತನು ಈ ವಾಯಸನ ಮೇಲೆ ಹತ್ತಿ ಕೊಂಡು, ಈ ಕೂರ್ಮ ಸಿಕ್ಕಿರ್ದ ಬಲೆಯ ಬಳಿಗಂ ಬಂದು, ಆ ಬಲೆಯನೆಲ್ಲಾ ಕಡಿದು, ಕೂರ್ಮನಂ ಕೂಡಿ ಕೊಂಡು ಬಂದು, ತಾವು ನಾಲ್ವರು ಮಹಾ ಸೌಜನ್ಯದಿಂದ ಸೌಖ್ಯದಿಂದ ಇದ್ದರು.—ಅದು ಕಾರಣದಿಂದ ದರಿದ್ರನಾದರೆಯೂ ಶಕ್ತಿಹೀನನಾದರೆಯೂ ಮಾನಹೀನನಾದರೆಯೂ ಕುರೂಪನಾದರೆಯೂ ಮಿತ್ರರಾಗಿ ಇದ್ದರೆ ಮಹಾ ಕಾರ್ಯಂಗಳಂ ಕಾಣ ಬಹುದು.



# ೩ನೇ ತಂತ್ರ.

## ಕಾಗೆಗಳಿಗೂ ಗೂಗೆಗಳಿಗೂ ವೈರತ್ವವಿದ್ದದೆಂಬ ಕಾಕೋಲೂಕೀಯವು.

ಅನುಪಮ ದೇಶದಲ್ಲಿ ಪಾರಿಯಾತ್ರವೆಂಬ ಪರ್ವತ ಉಂಟು; ಆ ಪರ್ವತದ ಕೋಡುಗಲ್ಲಿನ ಮೇಲೆ ಗುಹೆಯಲ್ಲಿ ವೀರವರ್ಮನೆಂಬ ಗೂಗೆರಾಜಂ ಅನೇಕ ಕುಲ ಗೋತ್ರ ಮಿತ್ರ ಕಳತ್ರ ಬಂಧುಗಳ ವರ್ಗವಂ ಕೂಡಿ ಕೊಂಡು, ಸಮಸ್ತ ಪ್ರಜೆ ಪರಿವಾರವಂ ಕೂಡಿ ಕೊಂಡು, ರಕ್ತಾಕ್ಷನೆಂದೂ ಧೂಮ್ರಾಕ್ಷನೆಂದೂ ಕ್ರೂರಾಕ್ಷನೆಂದೂ ವಕ್ರಾಕ್ಷನೆಂದೂ ದಿಪ್ತಾಕ್ಷನೆಂದೂ ಈ ಐವರು ಪ್ರಧಾನರಂ ಕೂಡಿ ಕೊಂಡು, ಮಹಾ ಸತ್ತ್ವದಿಂದ ಸುಬುದ್ಧಿಯಿಂದ ರಾಜ್ಯವನ್ನಾಳಿ ಕೊಂಡು ಇರುತ್ತಂ ಇರಲು; ಇತ್ತಲಾ ಪರ್ವತಕ್ಕೆ ಯೋಜನಾಂತರದಲ್ಲಿ ಗಂಧರಸವೆಂಬ ಪರ್ವತದ ತಪ್ಪಲಲ್ಲಿ ಒಂದು ವಟವೃಕ್ಷದ ಮೇಲೆ ಮೇಘವರ್ಣನೆಂಬ ವಾಯಸರಾಜಂ ತನ್ನ ಕುಲ ಗೋತ್ರ ಮಿತ್ರ ಬಂಧು ಕಳತ್ರರ ವರ್ಗವಂ ಕೂಡಿ ಕೊಂಡು, ಸಕಲ ಪ್ರಜೆ ಪರಿವಾರವೆಲ್ಲವಂ ಕೂಡಿ ಕೊಂಡು, ಉಜ್ಜೀವಿಯೆಂದೂ ಸಂಜೀವಿಯೆಂದೂ ಅನುಜೀವಿಯೆಂದೂ ಚಿರಂಜೀವಿಯೆಂದೂ ಈ ನಾಲ್ವರು ಪ್ರಧಾನರು ಸಹಾ ಮಹಾ ಸತ್ತ್ವದಿಂದ ರಾಜ್ಯವನ್ನಾಳಿ ಕೊಂಡು ಇರುತ್ತಾ ಇರಲು; ಇತ್ತಲಾ ಗೂಗೆರಾಜಂ ಮಹಾ ಗರ್ವದಿಂದ, ತನಗಾರೂ ಸರಿಯಿಲ್ಲವೆಂದು, ಹೇಳಿ, ಬಹಳ ಅಹಂಕಾರ

ದಿಂದ ತನ್ನ ಪ್ರಧಾನರಂ ಕರದು—ನನಗೆ ಸಂಪತ್ತು ಏನೂ ಕಡಿಮೆಯಿಲ್ಲಾ, ಸಾಹಸದೊಳಗೆ ಯಾರೂ ಇದಿರು ಇಲ್ಲಾ; ಅದು ಕಾರಣ ಸರ್ವ ಪಕ್ಷಿಸಂರಾಜಪಟ್ಟವಮಂ ಕಟ್ಟಿ ಕೊಳ ಬೇಕು! ಎಂತ, ಹೇಳಿ, ಗೂಗೆರಾಜಂ ಅದಕ್ಕೆ ತಕ್ಕ ಸಾರಣೆಯು ಮಾಡ ಬೇಕು! ಎಂದು, ಹೇಳಿ, ಮಹಾ ಹರುಷದಿಂದ ಇರಲು; ಈ ವಾರ್ತೆಯಂ ಇತ್ತಲಾ ಮೇಘವರ್ಣನೆಂಬ ವಾಯಸರಾಜಂ ಕೇಳಿ, ಮಹಾ ಚಿಂತಾಕ್ರಾಂತನಾಗಿ, ತನ್ನ ಪ್ರಧಾನರಂ ಕರದು—ನಮಗೆ ಶತ್ರುವಾದಂಥ ಗೂಗೆರಾಜನು ಸಂರಾಜಪಟ್ಟವಂ ಕಟ್ಟಿ ಕೊಳುತ್ತಾನಂತೆ; ಮೊದಲೇ ನಮಗೆ ಮಹಾ ವೈರನು, ಸಂರಾಜಪಟ್ಟವಮಂ ಕಟ್ಟಿ ಕೊಂಡ ಮೇಲೆ ಅತ್ಯಂತ ವೈರದಿಂದ ನಮ್ಮನು ಪ್ರಯಾಸಂ ಬಡಿಸಿ, ಉಳಿಯಗೊಡನು; ಇದಕ್ಕೆ ಇನ್ನೇನು ಉಪಾಯು? ಎಂದು, ಪ್ರಧಾನರಂ ಕೇಳಲು; ಆ ಉಜ್ಜೀವಿಯೆಂಬ ಪ್ರಧಾನಿ ಇಂತೆಂದಂ—ಎಲೇ ಮೇಘವರ್ಣನೆಂಬ ವಾಯಸರಾಜನೇ, ಮಹಾ ಸತ್ತ್ವಾಧಿಕನ ಕೂಡೆ ಹಗೆ ಕಟ್ಟಿ ಕೊಂಬದು ಮಹಾ ದೋಷ, ಆತನೊಡನೆ ಸಂಧಾನವಮಂ ಮಾಡಿ ಕೊಂಡು, ಆತನ ಓಲೈಸಿ ಕೊಂಡು ಇರ ಬೇಕು; ಇದೀಗ ಪೂರ್ವದ ನೀತಿಯೆಂದು, ಹೇಳಲು; ಆ ಮಾತಿಗೆ ಸಂಜೀವಿಯೆಂಬ ಪ್ರಧಾನಿಯಿಂತೆಂದಂ—ತನ್ನ ಸತ್ತ್ವವನರಿತಿರ ಬೇಕು, ದೇಶಕಾಲ ವರ್ತಮಾನಗಳನರಿತಿರ ಬೇಕು; ಇಂಥಾದ ಅರಿತು, ಬಂದು ಕಾರ್ಯವ ಮಾಡ ಬೇಕು! ಎಂದು, ಹೇಳಲು; ಆ ಮಾತಿಗೆ ಅನುಜೀವಿಯೆಂಬ ಪ್ರಧಾನಿ ಇಂತೆಂದಂ—ರಾಜ್ಯವಮಂ ಬಿಟ್ಟು ಹೋಗ ಬೇಕು, ಇದೀಗ ನಾ

ನು ಹೇಳುವ ನೀತಿ; ಇನ್ನಾವ ವಾಗ್ವಾದವೂ ಬೇಡ; ಅದೆಂತೆನೆ—

## ೧ನೇ ಕಥೆ.

ಕತ್ತೆ ತನ್ನ ಬಾಯಿಯ ಶಬ್ದದಿಂದ ಕೆಟ್ಟದ್ದು.

ಶೋಭಾವತಿಯೆಂಬ ಪಟ್ಟಣದಲ್ಲಿ ವಿಕ್ರಮಸೇನನೆಂಬ ರಾಯಂ ಸುಖದಿಂದ ರಾಜ್ಯವನಾಳುತ್ತಂ ಇರಲು; ಆ ಪುರದೊಳಗೋರ್ವ ಧವಳಶರ್ಮನೆಂಬ ರಜಕಂ ತನ್ನ ಕೈಕೂಲಿಯಂ ಮಾಡಿ ಕೊಂಡು ಇರಲು; ದೇವಾಧೀನತೆಯಿಂ ದೇಶಕ್ಕೆ ಕ್ಷಾಮ ಡಾಮರದಿಂದ ದುರ್ಭಿಕ್ಷ ಬರಲಾಗಿ; ಆ ರಾಯನ ಉದ್ಯಾನವು ಮಹಾ ಕಿರುನೆಳಲಾಗಿ, ಸೌಖ್ಯವಾಗಿ ಇರಲು; ಆ ರಜಕನು ಅಲ್ಲಿಗೆ ಹೋಗಿ, ಉಪಾಯಾಂತರದಿಂದ ತನ್ನ ಗರ್ದಭನ ಮೇಯಿಸ ಬೇಕೆಂದು, ಆ ಗರ್ದಭನ ಸರ್ವಾಂಗಕ್ಕೆಲ್ಲಾ, ಆರೂ ಕಾಣದ ಹಾಗೆ, ಹುಲಿಚರ್ಮ ಹೊದಿಸಿ, ಆ ಉದ್ಯಾನದಲ್ಲಿ ಕಾಲ ಕಟ್ಟಿ ಬಿಡುವನು; ಆ ಗರ್ದಭಂ ಚನ್ನಾಗಿ ಎಳೆ ಹುಲ್ಲು ಮೆದ್ದು, ಮಹಾ ಪುಷ್ಟಿಯಾಗಿ, ಸುಖದಿಂದ ಇರಲು; ಆ ವನವ ಕಾಯ್ವ ತಳವಾರರು ಇದನ್ನು ಕಂಡು, ಹುಲಿಯೆಂದೇ, ತಿಳಿದು ಕೊಳದೆ ಇರುವರು; ಈ ಪ್ರಕಾರದಿಂದ ಗರ್ದಭನು ಆಹಾರವ ಮಾಡಿ ಕೊಂಡು, ಸುಖದಲ್ಲಿ ಇರುವದು; ಒಂದು ದಿನಂ ನಾಡ ಮೇಲಣ ಬಣಜಿಗರು ಹೇರನ್ನು ಕೊಂಡು ಬಂದು, ಆ ಉದ್ಯಾನದ ಬಳಿಯಲ್ಲಿ ಇಳುಹಿ ಕೊಂಡು, ತಮ್ಮ ತಮ್ಮ ಕತ್ತೆಗಳನ್ನು ಮೇಯುವರೆ ಬಿಟ್ಟು, ಇರಲು; ಬೆಳಗಿನ ಝಾವದಲ್ಲಿ ಈ ಕತ್ತೆಗಳೆಲ್ಲಾ ಒದರಲು; ಈ ವನದ ಒಳಗೆ ಮೇಯುತ್ತಿದ್ದ ಕತ್ತೆಯು, ತಾನು ಒದರದೆ ಸುಮ್ಮನೇ ಇದ್ದರೆ ತಮ್ಮ ಜಾತಿಗೆ ಕೊರತೆಯೆಂದು, ಮಹಾ ಧ್ವನಿಯಿಂದ ಕೂಗಲು, ಇದನ್ನು ತಳವಾರರು ಕಂಡು, ಬೆರಗಾಗಿ—ನಾವು ಇಷ್ಟು ದಿವಸ ಹುಲಿಯೆಂದೇ, ಮಾಡಿ ಇದ್ದೆವು; ಇದು ಕತ್ತೆಯೆಂದು, ಇರಿದು, ಕೊಂದರು.

ಅದು ಕಾರಣ ಬಯಲ ವಾಗ್ವಾದದಿಂದ ಫಲವಿಲ್ಲಾ! ಎಂದು, ಈ ಕಥೆಯಂ ಹೇಳಲು; ಆ ಚಿರಂಜೀವಿಯೆಂಬ

ಮುದಿಪ್ರಧಾನಿ ಇಂತೆಂದಂ—ಎಲೇ ರಾಯ, ಇವರು ಹೇ
ಳಿದ್ದೆಲ್ಲಾ ಶಾಸ್ತ್ರಸಿದ್ಧಾಂತವೇ, ತನ್ನ ತನ್ನ ಕಾಲಕ್ಕಂ
ವಿಹಿತವೇ; ಆದರೆಯೂ ಈ ವೇಳ್ಯದಲ್ಲು ದ್ವೈಬುದ್ಧಿಭಾ
ವವೇ ಬೇಕು; ಪೂರ್ವದಲ್ಲು ಕಾಗೆ ಗೂಗೆಗಳಿಗೆ ಜಾತಿ
ಯಿಂದ ವೈರಂ ಬಂದುದು; ನಾವು ಏನು ಮಾಡಿದರೆಯೂ,
ನಾನಾ ಬಗೆಯಲ್ಲು ಹೊಕ್ಕು ಕಂಡು ಓಲಯಿಸಿದರೆಯೂ,
ನಮ್ಮ ಮೇಲಣ ವೈರ ಬಿಡದು; ಅದು ಕಾರಣ ಈ ಪ
ಟ್ಟವ ಕಟ್ಟಿ ಕೊಂಬ ವೇಳ್ಯದಲ್ಲು ಉಪಾಯಾಂತರದಿಂ
ವಿಘ್ನವ ಮಾಡಿ, ಪಟ್ಟವ ಕಟ್ಟಿ ಕೊಳಲೀಸದೆ, ಆ ಗೂಗೆ
ರಾಜನ ಕೊಲ್ಲ ಬೇಕು! ಎಂದು, ಹೇಳಲು; ಈ ವಾಯ
ಸರಾಜಂ ಪ್ರಧಾನಿ ಆಡಿದ ಮಾತಿಗೆ ಮಹಾ ಸಂತೋಷ
ವಂ ಬಟ್ಟು, ಸಪ್ತಾಂಗವಂ ಕೊಟ್ಟು, ನಾನಾ ಪ್ರಕಾರ
ದಿಂದ ಆ ಗೂಗೆ ಸರ್ವಪಕ್ಷಿಕುಲದ ಸಂರಾಜಪಟ್ಟವ ಕ
ಟ್ಟಿ ಕೊಳದ ಹಾಗೆ ಮಾಡಿ, ಬಾ! ಎಂದು, ಈ ಚಿರಂಜೀ
ವಿಯೆಂಬ ಪ್ರಧಾನನಂ ಕಳುಪಲು; ಆತನೈತರಲು; ಆ
ಗೂಗೆರಾಜನ ಪ್ರಧಾನರು ಕಂಡು, ತಮ್ಮ ರಾಜಂಗೆ ಪಟ್ಟ
ಕಟ್ಟುವ ಕಾರ್ಯಕ್ಕೆ ಬಂದಿದ್ದಾನೆಂದು, ನೆನಸಿ, ಬಂದ
ಕಾರ್ಯವೇನು? ಎಂದು, ಕೇಳಲು; ಈ ಚಿರಂಜೀವಿ ಮ
ಹಾ ಚಿಂತಾಕ್ರಾಂತನಾದಂತೆ ಬಿಸುಸುಯ್ದು—ನಾನು ಬಂ
ದ ಕಾರ್ಯವ ಕೇಳುವದು ಇನ್ನ್ಯಾವದು? ನಾವು ಮ
ಹಾ ನೀಚರನ್ನು ಓಲೈಸಿ, ಬದುಕಿದೆವು; ಇನ್ನು ಮುಂ
ದೆ ನಿಮ್ಮ ಗೂಗೆರಾಜನ ಓಲೈಸುವೆವು ಎಂದರೆ, ಈತನು
ಉತ್ತಮನೇ? ನೀಚರಾಗಿ ಇದ್ದವರ ಓಲೈಸುವದರಿಂದ
ದೇಶದೊಳಗೆ ಯಾಚಿಸಿ ಕೊಂಡು ಇರುವದೇ ಲೇಸೆಂದು,

ಮತ್ತಿಂತೆಂದುದು—ಅತ್ಯಂತ ಮಳೆಯುಹಣ, ಏನೂ ಮಳೆ ಇಲ್ಲದೆ ಇರುವಣ, ಇಲಿ ಹೆಗ್ಗಣಗಳು ಹೆಚ್ಚುವಣ, ಅರಸುಗಳು ಅನ್ಯಾಯುವ ಮಾಡುವಣ, ಇಷ್ಟು ಸೊಗಯಿಸದೆಂದು, ಹೇಳಿ, ಮತ್ತಿಂತೆಂದುದು—ಅರಸುಗಳ ಸಮೀಪದಲ್ಲು ಇರ ಬಾರದು, ಅತಿ ದೂರದಲ್ಲು ಇರ ಬಾರದು, ಒಂದು ಮಧ್ಯದಲ್ಲು ಇರ ಬೇಕು; ಅದೆಂತೆನೆ—

## ೨ನೇ ಕಥೆ.

ಜಗಳಗಂಟಿಗರಾದ ಗಿಣಿಯೂ ಮೊಲವೂ ಬೆಕ್ಕಿನಿಂದ ಕೆಟ್ಟದ್ದು.

ಸಾನುಮಾನವೆಂಬ ಪರ್ವತದ ತಪ್ಪಲಲ್ಲು ಇರುವ ಒಂದು ವಟವೃಕ್ಷದ ಮೇಲೆ ಸುಮುಖಿಯೆಂಬುದೊಂದು ಜಾಣವಕ್ಕಿಯು ಗೂಡು ಮಾಡಿ ಕೊಂಡು, ಇರುವದು; ಆ ವೃಕ್ಷದ ಕೆಳಗೆ ವಿಚಲನೆಂಬುದೊಂದು ಶಶಕನು ಮನೆಯ ಮಾಡಿ ಕೊಂಡು, ಇರುವದು; ಆ ಹಕ್ಕಿಯು ಈ ಶಶಕನ ಸಮೀಪಕ್ಕಂ ಬಂದು, ಆಹಾರಾರ್ಥವಾಗಿ ಹೋಗುವಾ! ಎಂದು, ಕರೆಯಲು; ಆ ಶಶಕ ಇಂತೆಂದುದು—ಈ ಮಾಸವು ಮಹಾ ಶೈತ್ಯವು; ಈ ಶೈತ್ಯ ಕಾಲದಲ್ಲು ಮನೆಯ ಬಿಟ್ಟು, ಹೋಗ ಬಾರದೆನಲು; ಆ ಜಾಣವಕ್ಕಿ ಇಂತೆಂದುದು—ಎಲೇ ಭ್ರಾಂತಬುದ್ಧಿಯಾದ ಶಶಕನೇ, ಈ ಮಾಘಮಾಸದಲ್ಲಿ ಹಿಮ ಇಲ್ಲ, ಹಿಮವೆಲ್ಲಾ ಪುಷ್ಯಮಾಸದಲ್ಲಿಯೇ ಹಿಂದಾಯಿತು; ಬಯಲ ಭ್ರಾಂತಿ ಬೇಡ; ಪರಿಣಾಮದಲ್ಲು ಆಹಾರವ ಮಾಡಿ ಕೊಂಡು, ಬರುವಾ! ಎಂದು, ನುಡಿಯಲು; ಆ ಶಶಕಂ ಮಹಾ ಕೋಪವಂ ಪಿಡುಕೊಂಡು, ಅತ್ಯಂತವಾದ ಸ್ನೇಹವು ಕೆಟ್ಟು, ಒಂದಕ್ಕೆ ಒಂದು ವಾಗ್ವಾದವಂ ಮಾಡಿ ಕೊಂಡು, ಮಹಾ ಕಲಹಂಗಳಾಗಲು;—ಸ್ನೇಹವಾದವನ ಬಳಿಯಲ್ಲು ವಾಗ್ವಾದವ ಮಾಡ ಬಾರದು, ಸಾಲವ ತೆಗೆಯ ಬಾರದು, ಆತನ ಸತಿಯ ಕೂಡೆ ಏಕಾಂತದಲ್ಲಿ ಮಾತನಾಡ ಬಾರದು; ಈ ಮೂರು ಕಾರ್ಯವ ಮಾಡಿದಾಗಲೇ ಎಂಥಾ ಸ್ನೇಹವೂ ಕೆಡುವುದು; ಈ ಕಾರ್ಯಗಳ ಮಾಡದೆ ಇ

ದ್ದರೆ ಸ್ನೇಹಸಂಬಂಧ ನಡವುದು; ಇಂತೆಂಬ ನೀತಿಯುಂಟಾಗಿ, ಪುಷ್ಯ ಮಾಘ ಈ ಎರಡು ಮಾಸಗಳ ಒಳಗೆ ಮಹಾ ಶೈತ್ಯಕಾಲ ಯಾವದು? ಎಂದು, ಬಲ್ಲವರ ಕೇಳುವ! ಎಂದು, ಈ ಎರಡು ವಾಗ್ವಾದವಮಂ ಮಾಡಿ ಕೊಂಡು, ಕಂಡ ಕಂಡವರ ಕೂಡ ತಮ್ಮ ನ್ಯಾಯಮಂ ಹೇಳುತ್ತಾ, ತಿದ್ದಿ ಕೊಡಿ! ಎಂದು, ಹೇಳಲು; ಸರ್ವರೆಲ್ಲಾ ಈ ಮಾತಂ ಕೇಳಿ, ತಮ್ಮೊಳು ತಾವೇ ಗಹಗಹಿಸಿ ನಕ್ಕು, ಈ ನ್ಯಾಯವ ನಾವು ತಿದ್ದಲರಿಯೆವು ಎಂದು, ಹೇಳಲು; ಇವರಿಬ್ಬರು ಮಹಾ ವ್ಯಾಕುಲದಿಂದ ಸಕಲ ದೇಶಮಂ ತಿರುಗುತ್ತಾ, ವಿಂಧ್ಯಪರ್ವತದ ತಪ್ಪಲಿಗೆ ಬರಲು; ಆ ಪರ್ವತದ ತಪ್ಪಲಲ್ಲಿ ಶಾಂತವತಿಯೆಂಬ ಪಟ್ಟಣ; ಆ ಪುರಕ್ಕೆ ಒಂದು ಯೋಜನಾಂತರದಲ್ಲಿ ನೇತ್ರಾವತಿಯೆಂಬ ನದಿಯ ತೀರದಲ್ಲಿ ಒಂದು ದೊಡ್ಡ ಗುಡಿಯೊಳು ದಧಿವರ್ಣನೆಂಬುದೊಂದು ವೃದ್ಧನಾದ ಬೆಕ್ಕು; ಅದು ನಾಲ್ಕು ಕಡೆಯ ಸರ್ವರ ಮನೆಯಲ್ಲಿ ಕದ್ದು ತಿಂದು, ಜಲ್ಮವನೇ ಹೊರದು, ಒಂದು ದಿನಂ ನಿಶಾಚರನೆಂಬ ವ್ಯಾಧನ ಮನೆಯಲ್ಲಿ ಮೊಸರ ಗಡಿಗೆಯಲ್ಲಿ ತಲೆಯನಿಕ್ಕಿ, ತಿನ್ನುತಾ ಇರಲು; ಆ ವ್ಯಾಧಂ ಬಂದು, ಬೆಕ್ಕಂ ಹೊಡೆಯಲು; ಆ ಬೆಕ್ಕು ಕಂಗೆಟ್ಟು, ಓಡಿಯೇನೆಂದು, ಆ ಮಡಕೆಯೊಡದು, ಅದರ ಕಂಠ ಕೊರಳಿಗೆ ಶಿಕ್ಕಿ, ಬರಲು; ಮುಂದೆ ಈ ಮಾರ್ಜಾಲಕ್ಕೆ ಎಲ್ಲಿಯಾದರೂ ಆಹಾರಮಂ ಕೊಂಬುದು ವಶವಲ್ಲದೆ, ಆ ದೇವಸ್ಥಾನಮಂ ಶೇರಿ ಕೊಂಡು, ಬಕಧ್ಯಾನಮಂ ಮಾಡಿ ಕೊಂಡು, ಕಾಶಿಯಾತ್ರೆಯ ಹೋಗ ಬೇಕೆಂದು, ಮಹಾ ತಪಸ್ವಿಯಂತೆ ಇರಲು; ಈ ಜಾಣವಕ್ಕಿಯೂ ಈ ಶಶಕನೂ ಆ ಮಾರ್ಜಾಲನಂ ಕಂಡು—ಈತನೀಗಲೇ ಮಹಾ ಪುರುಷನು; ಈತನ ಕೈಯಲಲ್ಲದೆ ನಮ್ಮ ನ್ಯಾಯ ತಿದ್ದದು! ಎಂದು, ಆ ಮಾರ್ಜಾಲನ ಸಮೀಪಕ್ಕಂ ಬಂದು, ಎಲೇ ಮಹಾ ಪುರುಷನೇ, ನಮ್ಮ ಇಬ್ಬರ ನ್ಯಾಯವನ್ನು ತಿದ್ದಿ ಕೊಡ ಬೇಕು! ಎಂದು, ಮಹಾ ಭಕ್ತಿಯಿಂದ ವಂದನೆಯ ಮಾಡಿ, ನಿಲ್ಲಲು; ಆ ಮಾರ್ಜಾಲಂ ಮಹಾ ಕೋಪಿಸಿ ಕೊಂಡು—ಇಂಥಾ ಪಾಪದ ನುಡಿಯ ಕೇಳಿದೆವು; ನ್ಯಾಯವ ಹೇಳಿದರೆ ಎಷ್ಟು ದಿನ ಬದುಕುವೆವು? ಇಂಥಾ ಪಾತಕರು ನೀವು ಇಲ್ಲಿಗೇತಕ್ಕೆ ಬಂದಿರಿ?

ಎಂದು, ರೋಷಿಸಿ ಕೊಳಲು; ಇವರಿಬ್ಬರು ಮಹಾ ದೈನ್ಯದಿಂದ ಬಿಂನೈಸಲು; ಆ ಮಾರ್ಜಾಲಂ ಇಂತೆಂದುದು—ಒಂದು ದಿನ ಪೌರೋಹಿತ್ಯವ ಮಾಡಿದರೆ, ಮೂರು ದಿವಸ ಮಠದ ಪಾರುಪತ್ಯವ ಮಾಡಿದರೆ, ಆರು ತಿಂಗಳು ಗ್ರಾಮದ ಅಧಿಕಾರವ ಮಾಡಿದರೆ, ಛಿನ್ನಸಂಶಯವಾಗಿ ಚಾಂಡಾಲರಹರು; ಅದು ಕಾರಣ ಬಲ್ಲವರು ಕೂಟಸಾಕ್ಷಿಯನ್ನೂ ನ್ಯಾಯವನ್ನೂ ಹೇಳ ಬಾರದು! ಎನಲು; ಅವರಿಬ್ಬರು ಮಹಾ ದೈನ್ಯಮಂ ಬಟ್ಟು, ಭಯಭಕ್ತಿಯಿಂದ ನಮಸ್ಕರಿಸಿ—ಎಲೇ ಸ್ವಾಮಿ, ನೀನು ಮಹಾ ಪುರುಷನು, ನಿನ್ನ ಕೈಯಲಲ್ಲದೆ ನಮ್ಮ ನ್ಯಾಯ ತಿದ್ದದು! ಎಂದು, ಮಹಾ ವಿನಯದಿಂ ಬೇಡಲು; ಆ ಮಾರ್ಜಾಲಂ ತನ್ನೊಳು ತಾನೇ ವಿಸ್ಮಯಂ ಬಟ್ಟು, ಇವು ಎರಡು ತನಗೆ ಆಹಾರಕ್ಕೆ ದೊರಕಿತು ಎಂದು, ಮಹಾ ಸಂತೋಷಮಂ ಬಟ್ಟು, ಇವನ್ನು ಕಪಟದಿಂದ ಭಕ್ಷಿಸ ಬೇಕೆಂದು, ನಿಶ್ಚೈಸಿ, ಮತ್ತಿಂತೆಂದುದು—ಸ್ತ್ರೀಯರೂ ಬಾಲರೂ ಕೃತಿಮರೂ ಮದ್ಯಪಾನವಂ ಮಾಡುವವರೂ ತನ್ನ ತಾನರಿಯದವರೂ ಧರ್ಮವ ಬಿಟ್ಟು ನಡವವರೂ ವಿಶ್ವಾಸಘಾತಕರಾಗಿ ಇದ್ದವರೂ ಧನಾಪೇಕ್ಷೆಯುಳ್ಳವರೂ ಪಕ್ಷಪಾತವಾಗಿ ನುಡಿವವರೂ ಮಿಥ್ಯಾಪವಾದಿಗಳೂ ಕಳ್ಳರೂ, ಇಷ್ಟು ಮಂದಿಯ ಕೈಯಲ್ಲು ನ್ಯಾಯವ ಹೇಳ ಬಾರದು; ಅದು ಕಾರಣ ನಾನು ನಿಮಗೆ ಹೇಳ ಬಾರದು ಎನಲು; ಇವು ಎರಡು ಕೈ ಮುಗಿದು ಕೊಂಡು—ಎಲೇ ಸ್ವಾಮಿ, ನಾವು ರಾಜ್ಯವನ್ನೆಲ್ಲಾ ತಿರುಗಿ ಬಂದೆವು; ಅದಕಾಗಿ ನಮ್ಮ ನ್ಯಾಯವ ತಿದ್ದಿ ಕೊಡಬೇಕು! ಎನಲು; ಆ ಮಾರ್ಜಾಲನು—ಒಳ್ಳಿತಾಯಿತು, ನಿಮ್ಮ ನ್ಯಾಯವ ಹೇಳ್ಯೇನು; ನನ್ನ ಕೊರಳಲ್ಲು ಇದ್ದ ಮಡಕೆಯನ್ನು ತೆಗಿ! ಎನಲು; ಇವು ಎರಡು ಆ ಮಡಕೆಯ ಕಂಠವನ್ನು ಒಡದು, ತೆಗೆಯಲು; ಆ ಮಾರ್ಜಾಲಂ ತನ್ನ ಬಂಧನ ಬಿಟ್ಟು ಹೋಗಲಾಗಿ;—ಮಹಾ ಸಂತೋಷದಿಂದ ನಿಮ್ಮ ಇಬ್ಬರ ನ್ಯಾಯವನ್ನು ಹೇಳ್ಯೇನು; ನೀವು ಇಬ್ಬರು ನಿಮ್ಮ ನ್ಯಾಯಮಂ ಪೂರ್ವಾಪರಮಂ ಬಂದು ನನ್ನ ಕಿವಿಯಲ್ಲು ಹೇಳಿದ್ದಲ್ಲದೆ ಕೇಳದು; ನಾನು ಮಹಾ ವೃದ್ಧನೆನಲು; ಇವು ಎರಡು ಹೋಗಿ, ಆ ಮಾರ್ಜಾಲನ ಕಿವಿಯ ಬಳಿಯಲ್ಲು ನಿಂತು, ಇರಲು;

ಅವೆರಡನು ಆ ಮಾರ್ಜಾಲಂ ತನ್ನ ಎರಡು ಕೈಯಲ್ಲು ಹಿಡಿದು ಕೊಂಡು, ಮುರಿದು, ಭಕ್ಷಿಸಿದುದು.

ಅದು ಕಾರಣದಿಂದ ನೀಚರಾಗಿ ಇದ್ದಂಥಾ ಅರಸನ್ನೂ ಕ್ಷುದ್ರರಾದಂಥಾ ಗುರು ಹಿರಿಯರನ್ನೂ ನಂಬಬಾರದು; ನಂಬಿದರೆ ಈ ರೀತಿಯಲ್ಲು ಕೆಡುವರು ಎಂದು, ಗೂಗೆರಾಜನ ಪ್ರಧಾನರ ಕೂಡೆ ಹೇಳಿ, ಅವರ ಮನಸಂ ಕೆಡಿಸ ಯೋಚಿಸಿ, ಆ ಗೂಗೆರಾಜಗೆ ಸಂರಾಜಪಟ್ಟವನ್ನು ಆಗಲೇ ಕಟ್ಟದ ಹಾಗೆ ಕಟ್ಟು ಮಾಡಿ, ಆ ಮೇಲೆ ತಾನು ಪ್ರಧಾನರ ಕೈಯಿಂ ಕಳುಹಿಸಿ ಕೊಂಡು, ತನ್ನ ಒಡೆಯನಾದ ಮೇಘವರ್ಣನ ಬಳಿಗಂ ಬಂದು, ಈ ವೃತ್ತಾಂತಮಂ ಬಿಂನೈಸಲು; ಆ ಮೇಘವರ್ಣನೆಂಬ ವಾಯಸರಾಜಂ ಮಹಾ ಸಂತೋಷದಿಂದ ಇರಲು; ಇತ್ತಲಾ ಗೂಗೆರಾಜನ ಪ್ರಧಾನರು ಐವರು ಕೂಡಿ, ತಮ್ಮೊಳು ಆಲೋಚಿಸಿ ಕೊಂಡು, ಈ ಗೂಗೆರಾಜಗೆ ಪಟ್ಟವಂ ಕಟ್ಟಿದರೆ ನಮ್ಮನ್ನು ಕೈಕೊಳ್ಳನೆಂದು, ನಿಶ್ಚೈಸಿ, ತಮ್ಮ ಒಡೆಯನಾದ ಗೂಗೆರಾಜನ ಬಳಿಗಂ ಹೋಗಿ—ದೇವರು ಪಟ್ಟವ ಕಟ್ಟಿ ಕೊಂಬುದಕ್ಕೆ ಜೋಯಿಸರ ಕೇಳಿದಲ್ಲಿ ಅವರು, ಈ ತಿಂಗಳು ಒಳ್ಳಿತಾಗಿ ಇಲ್ಲ, ಲಗ್ನವು ಇಲ್ಲ ಎಂತಾ, ಹೇಳಿದರು; ಅದು ಅಲ್ಲದೆ ನಮ್ಮ ಬಂಧು ಬಳಗ ಪ್ರಜೆ ಪರಿವಾರವೆಲ್ಲಾ ಕಂಡ ಕಡೆಗೆ ಹೋಗಿ ಇದ್ದಾರೆ; ಅವರೆಲ್ಲರನ್ನು ಕರಸಿ ಕೊಂಡು, ಒಳ್ಳೇ ಲಗ್ನದಲ್ಲು ಪಟ್ಟವ ಕಟ್ಟಿ ಕೊಳ್ಳ ಬೇಕು ಎನಲು; ಒಳ್ಳಿತಾಯಿತು, ಹಾಗೆ ಆಗಲಿ! ನಿಮ್ಮ ಮನಸು ಬಂದಾಗ ಪಟ್ಟವ ಕಟ್ಟ ಬಹುದೆನಲು; ಆ ಮೇಲೆ ಆ ಪ್ರಧಾನರಂ ಕಳುಹಿ, ಆ ಗೂಗೆರಾಜಂ

ಮಹಾ ವ್ಯಾಕುಲದಿಂದ ಕೆಲವು ದಿವಸವ ಕಳಿಯಲು; ಆ ಪ್ರಧಾನರಿಗೆ ಆಗದಂಥಾ ಕ್ರೈರಾಕ್ಷಸನೆಂಬುದೊಂದು ಗೂಗೆಯು ಬಂದು—ಎಲೇ ಗೂಗೆರಾಜಾ, ನಿನ್ನ ಪ್ರಧಾನರು ಕಾಗೆರಾಜನ ಪ್ರಧಾನ ಚಿರಂಜೀವಿಯ ಕೂಡೆ ಮಾತನಾಡಿ ಕೊಂಡರು; ನಿನ್ನ ಪಟ್ಟವ ಕಟ್ಟಿ ಕೊಳ್ಳದ ಹಾಗೆ ಮಾಡಿ, ಕೆಡಿಸಿದನು ಎಂದು, ಹೇಳಲು; ಆ ಗೂಗೆರಾಜನು ಈ ಗೂಗೆಯಂ ಸಂತವಿಟ್ಟು, ಇಂತೆಂದುದು—ಪರರಾದವರು ತನಗೆ ಹಿತವ ಚಿಂತಿಸಿದರೆ ಅವರೇ ತನ್ನವರು; ಆದರೆ ತನಗೆ ಅಹಿತವ ಮಾಡಿದರೆ ಅವರು ತನ್ನವರು ಅಲ್ಲ; ಅದೆಂತೆಂದರೆ, ತನ್ನ ಶರೀರದಲ್ಲಿ ಹುಟ್ಟಿದ ವ್ಯಾಧಿ ತನ್ನನ್ನೇ ಕೊಲುವದು, ಅರಣ್ಯದಲ್ಲಿ ಹುಟ್ಟಿದ ಮೂಲಿಕೆ ಔಷಧಿಯು ಕೊಡಲು ಆ ವ್ಯಾಧಿಯು ಕೆಡಿಸುವದು, ತನ್ನ ದೇಹವನುಳಿಸುವದು; ಇಂತೆಂಬ ನೀತಿಯುಂಟಾಗಿ, ತನಗೆ ಕಪಟವ ನೆನೆದ ಪ್ರಧಾನರಂ ಕೊಲ್ಲುವೆನೆನಲು; ಈ ಗೂಗೆಯು ಆ ಗೂಗೆರಾಜನ ಕೂಡೆ—ನಿನ್ನವರು ಪ್ರಧಾನರೆಂದೂ ನಂಬ ಬೇಡಾ; ಇವರ ಗುಣಗಳು ಇಂಥಾವೆಂದು, ನಾನಾ ಪ್ರಕಾರದಿಂದ ಹೇಳಲು; ಆ ಗೂಗೆರಾಜನು ಮಹಾ ಕೋಪವಂ ತಾಳಿ, ತನ್ನ ಪ್ರಧಾನರಂ ಕೊಲ್ಲುವೆನೆನಲು; ಈ ಗೂಗೆಯು ಆ ಗೂಗೆರಾಜನೊಡನೆ—ಈಗ ನಿನ್ನ ಪ್ರಧಾನರಂ ಕೊಲ್ಲುವದು ಉಚಿತವಲ್ಲ; ನಿನಗೆ ಶತ್ರುವಾದಂಥ ಕಾಗೆರಾಜನ ಸಂಹರಿಸಿದ ಮೇಲೆ ನಿನ್ನ ಪ್ರಧಾನರಿಂಗೆ ತಕ್ಕ ಆಜ್ಞೆಯಂ ಮಾಡು! ಎನಲು; ಆ ಮಾತಂ ಮನಸ್ಸಿನಲ್ಲಿ ಗ್ರಹಿಸಿ ಕೊಂಡು, ತನ್ನ ಸಕಲ ಸೈನ್ಯವಂ ಕರಸಿ ಕೊಂಡು, ಅರ್ಧ

ರಾತ್ರಿಯು ಕತ್ತಲೆಯಲ್ಲು ಈ ಕಾಗೆರಾಜ ಇರುವ ಮರಕ್ಕೆ ಮುತ್ತಿಗೆಯಂ ಹಾಕಲು; ಅವಕ್ಕೆಲ್ಲಾ ಉಪದ್ರವಂ ಮಾಡಿ, ಕೆಲವಂ ಕೊಂದು, ಈ ಪ್ರಕಾರದಲ್ಲು ನಾಲ್ಕು ಎಂಟು ದಿವಸದಲ್ಲು ರಾಜಕಾರ್ಯ ಮಾಡಿ ಕೊಂಡು ಇರಲು; ಆ ವಾಯುಸರಾಜಂ ಮಹಾ ನೊಂದು ಕೊಂಡು, ತನ್ನ ಪ್ರಧಾನರನ್ನ ಕರದು—ಇದಕ್ಕೆ ಇನ್ನೇನು ಯೋಚನೆ? ಮುಂದಣ ಪರಿ ಹ್ಯಾಗೆ? ಎಂದು, ಬೆಸಗೊಳಲು; ಅನುಜೀವಿಯೆಂಬ ಪ್ರಧಾನಿಯಿಂತೆಂದಂ—ಆವನಾನೊಬ್ಬನು ತನ್ನ ವೈರಿಯು ಕೊಲಲಾರದೆ ಇದ್ದರೆ ತನ್ನ ತಾಯಿಯ ಸುಖವ ಕೆಡಿಸುವದಕ್ಕೆ ಹುಟ್ಟಿದವನಲ್ಲದೆ ಪ್ರಯೋಜನವಿಲ್ಲಾ; ಇಂತೆಂಬ ನೀತಿಯುಂಟಾಗಿ, ಗೂಗೆರಾಜನ ಕೈಯಿಂ ಕೊಲಿಸಿ ಕೊಂಡು ಸಾವುದು ಉಚಿತವಲ್ಲಾ, ಈ ಶತ್ರುವನ್ನು ಅಲ್ಪನೆಂದು ಉದಾಸೀನವ ಮಾಡಿದ್ದರಿಂದ ಈಗ ನಾವು ಇಂಥಾ ಉಪದ್ರಕ್ಕೆ ಒಳಗಾದೆವು; ಶತ್ರುಗಳು ಅಲ್ಪರೆಂದು, ಬಗೆಯು ಬಾರದು; ಅದೆಂತೆಂದರೆ, ಈ ಸೂರ್ಯ ಚಂದ್ರರು ಇಬ್ಬರು ರಾಹು ಕೇತುಗಳಿಗೆ ಸರಿಯಾದ ವೈರಿಗಳು; ಆದರೂ ಸೂರ್ಯನು ಉಷ್ಣಕರನಾದ ಕಡೆಯಿಂದ ಬಹು ದಿನಕಲ್ಲದೆ ಗ್ರಹಣ ತಾಗುವದಿಲ್ಲ, ಚಂದ್ರನು ಶೈತ್ಯಕರನಾದ ಕಡೆಯಿಂದ ವೇಗ ಗ್ರಹಣ ಕುಡುಕುತ್ತದೆ; ಅದು ಕಾರಣ ವೈರಿಗಳಲ್ಲಿ ಕಠಿಣವಾಗಿ ಇರ ಬೇಕು; ಚಿರಂಜೀವಿಯು ಹೋಗಿ ಆತಗೆ ಪಟ್ಟ ಆಗದ ಹಾಗೆ ಕೆಡಿಸಿದ ಕಾರಣ ನಮಗೆ ಇಷ್ಟು ಪ್ರಯಾಸವಾಯಿತು; ಇನ್ನು ಈ ಗೂಗೆರಾಜನ ಕೂಡ ಕೊಲಿಸಿ ಕೊಂಡು ಸಾವುದಕ್ಕಿಂತಾ ಈ ಸ್ಥಳವನ್ನೇ ಬಿಟ್ಟು ಹೋ

ಗುವದು ಒಳ್ಳಿತೆಂದು, ಹೇಳಲು; ಆ ಉಜ್ಜೀವಿಯೆಂಬ ಪ್ರಧಾನಿ, ಆ ಗೂಗೆರಾಜನ ವಂಚಿಸುವದಕ್ಕೆ ಉಪಾಯ ಉಂಟು! ಎನಲು; ಆ ಮೇಘವರ್ಣನೆಂಬ ವಾಯಸರಾಜನು, ಅದು ಹ್ಯಾಗೆ? ಎಂದು, ಕೇಳಲು; ಆ ಪ್ರಧಾನ ಇಂತೆಂದಂ—

## ೩ನೇ ಕಥೆ.

ಕಿರಾತರ ಉಪಾಯಾಂತರದಿಂದ ವಿಪ್ರನು ಮೋಸ ಪಟ್ಟದ್ದು.

ಗೌಳದೇಶದಲ್ಲು ವಿಂಧ್ಯವಾಸಿಗಿರಿಯ ತಪ್ಪಲಲ್ಲು ಅಷ್ಟಪಾದವೆಂಬ ಪಟ್ಟಣದಲ್ಲು ರತ್ನಾಂಗದನೆಂಬ ರಾಯಂ ಸುಖದಿಂದ ರಾಜ್ಯವನಾಳುತ್ತಾ ಇರಲು; ಆ ಪಟ್ಟಣದ ಒಳಗೆ ಸುಖವೇದಿಯೆಂಬ ಒಬ್ಬ ಬ್ರಾಹ್ಮಣನು ಮಹಾ ವಿದ್ಯಾಸಂಪನ್ನನು; ತಾನು ಒಂದು ಹೋತನ್ನ ತಂದು ಮಹಾ ಯಜ್ಞವ ಮಾಡ ಬೇಕೆಂದು, ಆಲೋಚಿಸಿ ಕೊಂಡು, ಇರಲು; ಒಂದಾನೊಂದು ದಿವಸ ಆ ಬ್ರಾಹ್ಮಣಂ ನದಿಯ ಸ್ನಾನಕಂ ಹೋಗಿ, ಇರಲು; ಆ ನದಿಗೆ ಒಂದು ಹೋತು ತನ್ನ ಹಿಂಡು ತಪ್ಪಿ ಬಂದು, ನೀರು ಕುಡಿಯುತಾ ಇರಲು; ಅದನ್ನು ಈ ಬ್ರಾಹ್ಮಣಂ ಕಂಡು, ಮಹಾ ಸಂತೋಷದಿಂದ ಆ ಹೋತನ ಕಾಲ ಕಟ್ಟಿ, ತಲೆಯಲ್ಲು ಹೊತ್ತು ಕೊಂಡು, ಯಜ್ಞವ ಮಾಡ ಬೇಕೆಂದು, ತನ್ನ ಗೃಹಕ್ಕೆ ಹೋಗುತ್ತಂ ಇರಲು; ಆ ದಾರಿಯಲ್ಲು ಕಿರಾತರು ಮಹಾ ಕ್ಷುಧೆಯಂ ಬಟ್ಟು, ಈ ಬ್ರಾಹ್ಮಣನು ಹೋತನ್ನ ಹೊತ್ತು ಕೊಂಡು ಹೋಗುತ್ತಾ ಇರುವದಂ ಕಂಡು, ಉಪಾಯಾಂತರದಿಂದ ಈ ಹೋತನ್ನಾ ತೆಗದು ಕೊಳ್ಳ ಬೇಕು ಎಂದು, ತಮ್ಮೊಳು ಆಲೋಚಿಸಿ ಕೊಂಡು, ಈ ಬ್ರಾಹ್ಮಣ ಬರುವ ದಾರಿಯಲ್ಲು ನಿಂತು ಕೊಂಡು ಇರಲು; ಈ ಬ್ರಾಹ್ಮಣ ಆ ಹೋತನ್ನ ಹೊತ್ತು ಕೊಂಡು ಹೋಗುತ್ತಾ ಇರಲು, ಒಬ್ಬ ಕಿರಾತನು ಬಂದು— ಇದೇನು, ಬ್ರಾಹ್ಮಣಾ? ಸತ್ತು ಹೋದ ಹೋತನ್ನಾ ಹೊತ್ತು ಕೊಂಡು ಹೋಗ ಬಹುದೇ? ಎಂದು, ಕೇಳಲು; ಆ ಮಾತನು ಕೇಳದೆ, ಹೊತ್ತು ಕೊಂಡು ಹೋಗುತ್ತಂ ಇರಲು; ಮುಂದೆ ಮತ್ತೊಬ್ಬ ಕಿರಾತಂ

ಕಂಡು—ಇದೇನು, ಬ್ರಾಹ್ಮಣಾ? ಸತ್ತು ಹೋದ ಹೋತನ್ನಾ ಹೊತ್ತು ಕೊಂಡು ಹೋಗ ಬಹುದೇ? ಎಂದು, ಕೇಳಲು; ಅದನ್ನು ಕೇಳಿ, ನಿರ್ವೇದದಿಂದ ಮುಂದಕ್ಕೆ ಹೋಗುತ್ತಂ ಇರಲು; ಮುಂದೆ ಮತ್ತೊಬ್ಬ ಕಿರಾತಂ ಕಂಡು—ಇದೇನು, ಬ್ರಾಹ್ಮಣಾ? ಸತ್ತು ಹೋದ ಹೋತನ್ನಾ ಹೊತ್ತು ಕೊಂಡು ಹೋಗ ಬಹುದೇ? ಎಂದು, ಕೇಳಲು; ಆ ಬ್ರಾಹ್ಮಣಂಗೆ ಸಂದೇಹ ಹುಟ್ಟಿ, ಅಲ್ಲಿಯೇ ಬಿಸಾಟು, ಸಚೇಲ ಸ್ನಾನವಂ ಮಾಡಿ ಕೊಂಡು, ತನ್ನ ಗೃಹಕ್ಕಂ ಬಂದು, ಸುಖದಿಂ ಕುಳಿತಿರಲು; ಈ ಮೂರು ಮಂದಿಯು ಒಂದಾಗಿ ಕೂಡಿ, ಆ ಹೋತನ್ನ ತಮ್ಮ ಗೃಹಕ್ಕೆ ಹೊತ್ತು ಕೊಂಡು ಹೋಗಿ, ಪಾಕಮಂ ಮಾಡಿ, ಭಕ್ಷಿಸಿದರು.

ಅದು ಕಾರಣ ಈ ಮರಿಯಾದೆಯಲ್ಲು ಉಪಾಯಾಂತರದಿಂದ ಕಾರ್ಯವಾ ಕಾಣ ಬೇಕು ಎಂದು, ಹೇಳಲು; ಸಂಜೀವಿಯೆಂಬ ಪ್ರಧಾನಿಯಿಂತೆಂದಂ—

## ೪ನೇ ಕಥೆ.

ಹರದನು ಗಿಣಿಯು ಉಪಾಯಾಂತರದಿಂದ ಮೋಸ ಪಟ್ಟದ್ದು.

ಜ್ಯೋತಿಸ್ಮೃತಿಯೆಂಬ ಪಟ್ಟಣದ ಧರ್ಮಪಾಲನೆಂಬ ರಾಯಂ ಸುಖದಿಂದ ರಾಜ್ಯವನ್ನಾಳುತ್ತಾ ಇರಲು; ಒಂದಾನೊಂದು ದಿವಸಂ ಆ ರಾಯಂ ಒಡ್ಡೋಲಗಂಗೊಟ್ಟು, ಕುಳುತಿಪ್ಪ ಸಮಯದಲ್ಲು ಮತ್ತಾಂಗನೆಂಬ ಒಬ್ಬ ಬೇಡನು ಅಪೂರ್ವವಾದಂಥ ಒಂದು ಗಿಣಿಯಂ ತಂದು, ರಾಯಂಗೆ ಕಾಣಿಕೆಯಂ ಕೊಡಲು; ಆ ಗಿಣಿಯು ಚಲೋ ಚೇಷ್ಟಾಕಲಾವಿದ್ಯಮಂ ಬಲ್ಲದು; ಅನೇಕ ಚಿತ್ರವಿಚಿತ್ರವಾದ ನಾಟಿಕಾಲಂಕಾರಮಂ ತೋರಲು; ಆ ರಾಯಂ ಆ ಬೇಡಂಗೆ ಅನೇಕ ಉಚಿತಂಗಳಂ ಕೊಟ್ಟು, ಮನ್ನಿಸಿ, ಕಳುಹಿ, ಆ ಗಿಣಿಯಂ ಸಾಕಿ ಕೊಂಡು ಇರಲು; ಆ ಪಟ್ಟಣದೊಳು ಹೇಮಗೋಪನೆಂಬ ಹರದನು ಅತುಲ್ಯವಾದದೊಂದು ರತ್ನವ ಘಳಿಸಿ ಕೊಂಡು, ವಿಕ್ರಯಿಸುವದಕ್ಕೆ ತನ್ನ ಮನೆಯಲಿಟ್ಟಿರಲು; ಆ ಪುರದೊಳಗೋರ್ವ ಸತ್ಯಶೀಲನೆಂಬಂಥಾ ಬಣಜಿಗಂ ಇರಲು;

ಒಂದಾನೊಂದು ದಿವಸ ಈ ಬಣಜಿಗನು ಆ ಹರದನ ಮನೆಗಂ ಬಂದು, ಆ ರತ್ನಮಂ ಕಂಡು, ಮಹಾ ಆತುರನಾಗಿ ಮೋಹಿಸಿ, ತನ್ನ ಗೃಹಕ್ಕೆ ಬಂದು, ಆ ರತ್ನದ ಸೌಂದರ್ಯವ ನೆನನೆನದು, ಒಂದು ದಿವಸ ಆ ರತ್ನದ ಮೇಲಣ ಧ್ಯಾನದಲ್ಲಿಯೇ ಶಯನವ ಮಾಡಿ ಇರಲು; ಆ ರತ್ನಂ ತನಗೆ ಸಾವಿರ ಹೊನ್ನಿಗೆ ಬಂತೆಂದು, ಸ್ವಪ್ನವಾಗಲು; ಮರು ದಿವಸ ಉದಯದಲ್ಲು ಆ ಸತ್ಯಶೀಲನು ಎದ್ದು, ತನಗೆ ಆಪ್ತರಾಗಿ ಇದ್ದವರ ಕೂಡೆ, ನಿನ್ನೆ ರಾತ್ರೆ ಆ ಹರದನ ರತ್ನವ ಸ್ವಪ್ನದಲ್ಲು ಸಾವಿರ ಹೊನ್ನಿಗೆ ಕೊಂಡು ಕೊಂಡಿದ್ದೇನೆಂದು, ಹೇಳಲಾಗಿ; ಈ ಸುದ್ದಿಯ ಆ ಹರದಂ ಕೇಳಿ, ಮಹಾ ಹರುಷಿತನಾಗಿ, ಇದೀಗ ತನಗೆ ರೊಖ್ಖವ ತೆಗದು ಕೊಳುವರೆ ವೇಳ್ಯವೆಂದು, ತಾನು ಆ ಬಣಜಿಗನ ಮನೆಗೆ ಬಂದು, ಆತನ ಕೂಡೆ—ನಿನ್ನೆ ರಾತ್ರೆ ನೀನು ನನ್ನ ರತ್ನವ ಕೊಂಡು ಕೊಂಡಿ; ರೊಖ್ಖವ ತಾ! ಎಂದು, ಹೇಳಲು; ಆ ಬಣಜಿಗಂ, ಸ್ವಪ್ನದಲ್ಲಿ ಕ್ರಯ ಮಾಡಿ ಕೊಂಡದಕ್ಕೆ ರೊಖ್ಖವ ಕೊಡೆನು ಎನಲು; ಸಹಜದಲ್ಲಿಯೇ ನಿನ್ನೆ ರಾತ್ರೆಯಲ್ಲು ಕೊಂಡು ಕೊಂಡದು ಸಹಿ! ಎಂದು, ಆತನ ಶರಗಂ ವಿಡಿಯಲು; ಅವರಿಬ್ಬರಿಗೂ ವಾಗ್ವಾದವಾಗಿ, ಸರ್ವರ ಕೂಡೆ ಹೇಳಲು; ಅವರೆಲ್ಲರು ಚೋದ್ಯಮಂ ಬಟ್ಟು, ಈ ನ್ಯಾಯವ ತಮ್ಮಿಂದ ತಿದ್ದಲರಿಯದೆಂದು, ಹೇಳಲು; ಆ ಮೇಲೆ ಅವರು ಆ ಪಟ್ಟಣದ ಅರಸಿನ ಬಳಿಗಂ ಬಂದು, ತಮ್ಮ ನ್ಯಾಯವ ಹೇಳಲಾಗಿ; ಆ ರಾಯಂ ವಿಸ್ಮಯಂ ಬಟ್ಟು, ವಿಚಾರಂ ಗೈದು, ಆ ಹರದಂ ಹೇಳಿದ ಹಾಗೆ ರೊಖ್ಖವ ಕೊಡಬೇಕಾದೀತು ಎಂದು, ಆ ಬಣಜಿಗಗೆ ಹೇಳಲು; ಆ ಅರಸಿನ ಸಮೀಪದಲ್ಲು ಇದ್ದ ಗಿಣಿಯು—ಎಲೇ ರಾಯಾ, ಇದು ನ್ಯಾಯವಲ್ಲ; ಇವರ ನ್ಯಾಯವಾ ನಾನು ತಿದ್ದಿ ಕೊಡುವೆನೆಂದು, ಆ ಹರದನ ಕರದು, ಆ ರತ್ನದ ಬೆಲೆಯು ಏನೆಂದು, ಕೇಳಲು; ಸಾವಿರ ಹೊನ್ನೆನಲು; ಈ ಗಿಣಿಯು ಸಾವಿರ ಹೊನ್ನಂ ತರಿಸಿ, ಗಂಟು ಕಟ್ಟಿಸಿ, ಒಂದು ದೊಡ್ಡಿತಾದ ಕನ್ನಡಿಯಂ ತರಿಸಿ, ಇವರಿಬ್ಬರ ಸಮ್ಮುಖದಲ್ಲು ಇರಿಸಿ, ಆ ಕನ್ನಡಿಯ ಒಳಗೆ ತೋರುವ ಈ ಗಂಟಿನ ಪ್ರತಿಗಂಟಂ ತೆಗದು ಕೋ! ಎನಲು; ಕನ್ನಡಿಯೊಳಗಿನ ಗಂಟು ಹ್ಯಾಗೆ ತೆಗದು ಕೊಂಬುದು? ಎನ

ಲು; ಸ್ವಪ್ನದಲ್ಲು ಆದ ವ್ಯಾಪಾರಕ್ಕೆ ನಿನಗೆ ಹ್ಯಾಗೆ ರೊಖ್ಖವ ಕೊಡ ಬೇಕು? ಎಂದು, ಈ ಗಿಣಿಯು ಹೇಳಲು; ಆ ಹರದಂ ಮಹಾ ಲಜ್ಜಿತನಾಗಿ, ಈ ಗಿಣಿಯಂ ಕೊಲ್ಲ ಬೇಕೆಂದು, ಮಹಾ ವೈಷಮ್ಯವಂ ತಾಳಿ, ತನ್ನ ಗೃಹಕ್ಕಂ ಬಂದು, ಮೂರು ತಿಂಗಳ ಮೇಲೆ ಮಹಾ ಚಂದವಾದ ಮೌಕ್ತಿಕಮಾಲೆಯಂ ಕೊಂಡು, ಆ ರಾಯನ ಸಮೀಪಕ್ಕಂ ಬಂದು, ಎಲೇ ರಾಯಾ, ತನ್ನ ಮಾಲೆಯಂ ಪರೀಕ್ಷಿಸ ಬೇಕು! ಎನಲು; ರಾಯಂ ಮೆಚ್ಚಿ, ಅದಕ್ಕೆ ಬೇಡಿದ ವಸ್ತುವಾ ಕೊಡುವೆನೆನಲು; ಎಲೇ ರಾಯಾ, ಆ ಗಿಣಿಯಂ ಕೊಡ ಬೇಕು ಎನಲು; ರಾಯನು—ತನ್ನ ಪ್ರಾಣಸಾಟಿಯಾದ ಗಿಣಿಯು; ಇದನ್ನು ಅತ್ಯಂತ ಪ್ರೀತಿಯಿಂದ ಸಲಹಿ ಕೋ! ಎಂದು, ಗಿಣಿಯಂ ಕೊಟ್ಟು, ಆ ಮಾಲೆಯಂ ಕೊಂಡು ಕೊಳ್ಳಲು; ಆ ಹರದಂ ಮಹಾ ಸಂತೋಷದಿಂದ ಇಸ ಕೊಂಡು, ರಾಯನಂ ಬೀಳ್ಕೊಂಡು, ತನ್ನ ಗೃಹಕ್ಕಂ ಬಂದು, ತನ್ನ ಬೋನಗಿತ್ತಿಯಂ ಕರದು—ಈ ಗಿಣಿಯಂ ಕರಿದು, ಪಾಕವ ಮಾಡು! ಎಂದು, ಕೊಡಲು; ಅವಳು ಈ ಗಿಣಿಯ ಪಕ್ಕಮಂ ತರಿದು, ಇನ್ನೆಲ್ಲಿಗೂ ಹೋಗದೆಂದು, ಕೆಳಗಡೆಯಲ್ಲು ಇರಿಸಿ, ಉಳಿದ ಪಾಕ ಮಾಡುತ್ತಾ ಇರಲು; ಈ ಗಿಣಿಯು ತನ್ನೊಳು ಆಲೋಚಿಸಿ ಕೊಂಡು, ಹತ್ತರ ಇದ್ದ ಒಂದು ಬಿಲದ್ವಾರಮಂ ಕಂಡು, ಹೊಗಲು; ಈ ಬೋನಗಿತ್ತಿಯು ಈ ಗಿಣಿಯಂ ಕಾಣದೆ, ಅರಸುತ್ತಾ, ತನ್ನ ಒಡೆಯನು ಬೈದಾನು ಎಂದು, ಮತ್ತೊಂದು ಹಕ್ಕಿಯಂ ಕೊಂದು, ಪಾಕಮಂ ಮಾಡಿ, ಒಡೆಯಗೆ ಇಕ್ಕಲು; ಅವನು ಉಂಡು, ಸುಖದಲ್ಲು ಇರಲು; ಇತ್ತಲಾ ಗಿಣಿಯು ನುಚ್ಚುನುರಿಯಂ ತಿಂದು ಕೊಂಡು ಬದುಕಿ, ಕೆಲವು ದಿವಸದ ಮೇಲೆ ಹಾರಿ ಹೋಗಿ, ಇವನಿಗೆ ಒಂದು ಉಪಾಯಮಂ ಕಾಣ ಬೇಕೆಂದು, ಈ ಹರದಂ ಪೂಜೆಗೆ ಬರುವ ಗುಡಿಯಂ ಸೇರಿ, ಆ ವಿಗ್ರಹದ ಜಲಹರಿಣಿಯೊಳಗೆ ಅಡಗಿ ಇರಲಾಗಿ; ಎಂದಿನಂತೆ ಆ ಹರದಂ ಬಂದು, ಪೂಜೆಯಂ ಮಾಡಿ, ಭಯಭಕ್ತಿಯಿಂದ ವಂದನೆಯಂ ಗೈದು, ಕೈ ಮುಗಿದು ಹೋಗುತ್ತಂ ಇರಲು; ಈ ಗಿಣಿಯು ಇದನ್ನೆಲ್ಲಾಮಂ ಕಂಡು, ವಿಗ್ರಹದ ಹಿಂದಕ್ಕೆ ಬಂದು—ಎಲೇ ಹರದಾ, ನೀನು ಮಾಡುವಂಥ ಭಕ್ತಿ

ಗೆ ಮೆಚ್ಚಿದೆನು; ಇನ್ನೂ ಈ ಲೋಕದಲ್ಲಿ ಇರ ಬೇಡ! ನಿನ್ನನ್ನು ಕೈಲಾ
ಸಕ್ಕೆ ವೈಯುವೆನು! ಎನಲು; ಆ ಹರದನು ಇದನ್ನೆಲ್ಲಮಂ ಕೇಳಿ, ತಿರಿಗಿ
ಆ ವಿಗ್ರಹದ ಸಮೀಪಕ್ಕಂ ಬಂದು—ಎಲೇ ಸ್ವಾಮಿ, ನಾನು ಎಂದು ಬರ
ಲಿ? ಎಂದು ಕೇಳಲು; ಆ ಗಿಣಿಯಿಂತೆಂದುದು—ನೀನು ನಾಳಿನ ಸೋಮ
ವಾರ ದಿವಸ ನಿನ್ನ ಮನೆಯಲ್ಲು ಇದ್ದಂಥಾ ದ್ರವ್ಯವಾ ಧನ ಧಾನ್ಯರಾಸಿ
ಏರು ದನ ಕರು ಬೊಕ್ಕಸ ಭಂಡಾರ ಮುಂತಾಗಿ ಎಲ್ಲವನ್ನು ಧರ್ಮಕ್ಕೆ
ಕೊಟ್ಟು, ಕಾಷಾಯಾಂಬರವಂ ತೊಟ್ಟು ಕೊಂಡು, ರುದ್ರಾಕ್ಷೆಗಳ ಸರ
ಮಂ ಹಾಕಿ ಕೊಂಡು, ಸರ್ವಾಂಗಕ್ಕೆಲ್ಲಾ ವಿಭೂತಿಯಂ ಧರಿಸಿ ಕೊಂಡು,
ಬಾಹುದು! ಎಂದು, ಹೇಳಲು; ಈ ಹರದಂ ಮಹಾ ಸಂತೋಷದಿಂದ ತ
ನ್ನ ಗೃಹಕ್ಕಂ ಬಂದು, ಪರಮೇಶ್ವರನು ತನ್ನ ಕೈಲಾಸಕ್ಕೆ ಬರ ಹೇಳಿದನೆಂ
ದು, ಆ ಪಟ್ಟಣದ ಒಳಗೆ ಸುದ್ದಿಯಂ ಹುಟ್ಟಿಸಿ, ಸೋಮವಾರ ದಿವಸಂ ತ
ನ್ನ ಮನೆಯೊಳಗಿರ್ದ ಧನ ಧಾನ್ಯರಾಸಿ ಏರು ಮುಂತಾಗಿ ದಾನಧ
ರ್ಮಂಗಳಂ ಮಾಡಿ, ಆ ದೇವತೆ ತನಗೆ ಹೇಳಿದ ಮರಿಯಾದೆಯಲ್ಲು ಅಲಂ
ಕರಿಸಿ ಕೊಂಡು, ಕೈಲಾಸಕ್ಕೆ ಹೋದೇನೆಂದು, ಆ ದೇವಸ್ಥಾನಕ್ಕೆ ಬರಲು;
ಆ ವಾರ್ತೆಯು ಆ ಪಟ್ಟಣದ ರಾಯಂ ಕೇಳಿ, ತಾನು ತನ್ನ ಪ್ರಧಾನಿ ಸಹಿ
ತ, ಸಕಲ ಪ್ರಜೆ ಪರಿವಾರವೆಲ್ಲವು, ಈ ಆಶ್ಚರ್ಯಮಂ ನೋಡ ಬೇಕು ಎಂ
ದು, ಅಲ್ಲಿಗಂ ಬರಲು; ಆ ಹರದಂ ಬಂದು, ಆ ದೇವತೆಗೆ ಪೂಜೆಯಂ
ಮಾಡಿ, ಕೈ ಮುಗಿದು, ಸಾಷ್ಟಾಂಗ ಬಿದ್ದು, ನಿಂತು ಕೊಂಡು ಇರಲು;
ಇತ್ತಲಾ ಗಿಣಿಯು ಇದನ್ನೆಲ್ಲಾಮಂ ಕಂಡು, ಆ ವಿಗ್ರಹದ ಹಿಂದಿನಿಂ
ದ ಹೊರವಂಟು, ಬಂದು, ಆ ದೇವಸ್ಥಾನದ ಶಿಖರದ ಮೇಲೆ ಕುಳಿತು—
ಎಲೇ ಹರದಾ, ನಿನಗೆ ಎಲ್ಲಿ ಕೈಲಾಸ ಇದ್ದೀತು? ನೀನು ಅರಸನ ಕೈ
ಯಿಂ ನನ್ನನ್ನು ಇಸ ಕೊಂಡು ಹೋಗಿ ಕೊಂದೇನೆಂದು, ಮಾಡಿದ್ದಕ್ಕೆ
ನಾನು ಮಾಡಿದ ಉಪಾಯವಲ್ಲದೆ ನಿನಗೆ ಎಲ್ಲಿ ಸ್ವರ್ಗವೆಂದು, ಹೇಳಿ,
ಈ ಹರದನ ತಲೆಯ ಮೇಲೆ ವಿಷ್ಠಿಸಿ, ಹಾರಿ ಹೋಯಿತು; ಇತ್ತಲಾ
ಹರದಂ ಮುಖಭಂಗಿತನಾಗಿ, ಹುಚ್ಚಾಗಿ, ತಿರುಗುತ್ತಂ ಇರ್ದನು.

ಅದು ಕಾರಣ ಈ ಪ್ರಕಾರದಿಂದ ಉಪಾಯಾಂತರ
ದಿಂದ ಕಾರ್ಯಮಂ ಕಾಣ ಬೇಕು ಎಂದು, ಸಂಜೀವಿ

ಯೆಂಬ ಪ್ರಧಾನಂ ಹೇಳಲು; ಚಿರಂಜೀವಿಯೆಂಬ ಪ್ರ
ಧಾನ ಇಂತೆಂದಂ—

## ೫ನೇ ಕಥೆ.

ಕಪ್ಪೆಗಳು ಸರ್ಪದ ಉಪಾಯಾಂತರದಿಂದ ಕೆಟ್ಟದ್ದು.

ಪಾರಿಯಾತ್ರವೆಂಬ ದೇಶದಲ್ಲು ಧಾರಾಗ್ರಹವೆಂಬ ವನದೊಳಗೆ ನಿರ್ಮಲವಾಗಿ ಇರುವಂಥ ಸರೋವರದಲ್ಲು ಕಪ್ಪೆಗಳು ಬಹಳವಾಗಿ ಹೆಚ್ಚಿ, ಅನೇಕ ಕಾಲ ಪರಿಯಂತರದಲ್ಲು ಸುಖದಿಂದ ಇರಲು; ಆ ವನದೊಳಗೆ ಒಂದು ಕೃಷ್ಣಸರ್ಪನು ಇರುವನು; ಅದು ಒಂದು ದಿವಸ ಆ ಸರೋವರಕ್ಕಂ ಬಂದು, ಮಹಾ ಹಶಿದು ಇದ್ದು, ಈ ಕಪ್ಪೆಗಳಂ ಕಂಡು, ಇವಂ ತಿಂಬುವದಕ್ಕೆ ಉಪಾಯವಹುದು! ಎಂದು, ತನ್ನೊಳು ಆಲೋಚಿಸಿ ಕೊಂಡು, ಮಹಾ ಪ್ರಳಾಪಿಸುತ್ತಾ, ಶೋಕದಿಂದ ಅಳುತ್ತಿರಲು; ಆ ಕಪ್ಪೆಗಳೆಲ್ಲಾ ಕಂಡು, ವಿಸ್ಮಯಂ ಬಟ್ಟು, ಇದೇನು? ಎಂದು, ಕೇಳಲು; ಆ ಸರ್ಪನು ಮಹಾ ಪ್ರಳಾಪದಿಂದ—ತಾನು ಭಾರದ್ವಾಜ ಖುಷೀಶ್ವರನ ಮಗನಂ ಕಚ್ಚಲು, ಆ ಖುಷೀಶ್ವರನು ಮಹಾ ಕೋಪದಿಂದ, ನಿನಗೆ ಆಹಾರವಾಗಿ ಇದ್ದಂಥಾ ಮತ್ಸ್ಯ ಕಪ್ಪೆಗಳಿಗೆ ನೀನು ವಾಹನವಾಗಿ ಇರು! ಎಂದು, ಹೇಳಿ, ಶಾಪಮಂ ಕೊಟ್ಟನು; ಅದು ಕಾರಣ, ಖುಷಿಗಳ ಶಾಪ ತಪ್ಪದೆಂದು ಹೇಳಿ, ದುಃಖಂ ಬಡುತ್ತೇನೆ; ತಾನು ಅನಾಥನು, ತನ್ನನ್ನು ರಕ್ಷಿಸ ಬೇಕು ಎಂದು, ಮಹಾ ದೈನ್ಯಮಂ ಬಡಲು; ಆ ಕಪ್ಪೆಗಳು, ಈ ಮಾತು ನಿಶ್ಚಯವೆಂದು, ನಂಬಿ, ಆ ಸರ್ಪಗೆ ಭಾಷೆಯಂ ಕೊಟ್ಟು, ತಮ್ಮ ವಾಹನವಾ ಮಾಡಿ ಕೊಂಡು, ಕೆಲವು ದಿವಸಂ ಇರಲು; ಆ ಸರೋವರದಲ್ಲು ಇದ್ದಂಥಾ ಕಪ್ಪೆಗಳೆಲ್ಲಾ—ತಾವು ಹುಟ್ಟಿದ ಆರಭ್ಯವಾಗಿ ಈ ಸ್ಥಳದಲ್ಲಿ ಇದ್ದೆವು, ಒಂದೂ ಪುಣ್ಯಕ್ಷೇತ್ರವಾ ಕಾಣಲಿಲ್ಲ; ನಮ್ಮ ಪುಣ್ಯದಿಂದ ಈಗ ಒಂದು ವಾಹನವು ಶಿಕ್ಕಿತು, ಇನ್ನಾದರೂ ತೀರ್ಥಯಾತ್ರೆಗಳ ಮಾಡ ಬೇಕು! ಎಂದು, ಸರ್ಪನ ಬಳಿಗಂ ಬಂದು—ನಮ್ಮನ್ನು ಪುಣ್ಯಕ್ಷೇತ್ರಂಗಳಿಗೆ ಕರ ಕೊಂಡು ಹೋಗಿ, ತೋರಿಸು! ಎನಲಾಗಿ; ಆ ಸರ್ಪಂ ಮಹಾ ಸಂತೋಷಮಂ

ಬಟ್ಟು, ದಿನ ಒಂದಕ್ಕೆ ಒಂದು ಕಪ್ಪೆಯಂತೆ ತನ್ನ ಬೆನ್ನಿನ ಮೇಲೆ ಇರಿಸಿ ಕೊಂಡು, ಒಂದು ಪರ್ವತದ ತಪ್ಪಲಿಗಂ ಕೊಂಡು ಹೋಗಿ, ಅದನ್ನು ಭಕ್ಷಿಸಿ ಕೊಂಡು, ಈ ಪ್ರಕಾರದಿಂದ ಆ ಸರೋವರದಲ್ಲು ಇದ್ದ ಕಪ್ಪೆ ಗಳಂ ಎಲ್ಲವನು ಭಕ್ಷಿಸಿತು.

ಇನ್ನು ನಾನೊಂದು ಕಾರ್ಯವ ಹೇಳುವೆನು, ಕೇಳಿ! ಎಂದು, ಹೇಳಲಾಗಿ; ಅದು ಹ್ಯಾಗೆ? ಎನಲು; ನೀವು ನನ್ನ ಕಚ್ಚಿ ಕೊಂಡು ಹಾಕಿದ ಹಾಗೆ ಮಲಗುವೆನು, ನೀವು ಈ ಸ್ಥಳವಂ ಬಿಟ್ಟು ಹೋಗಿ! ಇತ್ತಲಾ ಗೂಗೆ ರಾಜಂ ಎಂದಿನಂತೆ ನಮ್ಮ ಮೇಲೆ ದಂಡೆತ್ತಿ ಬಂದಾನು; ಆತನ ನಾನು ಒಲೈಸಿ, ಕಾರ್ಯವನ್ನೆಲ್ಲಾ ಚಂದವಾ ಮಾಡ್ಯೇನು ಎನಲು; ಆ ಮೇಘವರ್ಣನೆಂಬ ವಾಯುಸ ರಾಜಂ ಮಹಾ ಸಂತೋಷವಂ ಬಟ್ಟು, ನಿನ್ನ ಮನಸಿಗೆ ಬಂದ ರೀತಿ ಕಾರ್ಯವ ಛಂದವಾ ಮಾಡೆಂತ, ಹೇಳಿ, ತಾನು ಹೊರಟು ಹೋಗಲು; ಈ ಚಿರಂಜೀವಿಯು ತನ್ನ ತಾನೇ ಕಚ್ಚಿ ಕೊಂಡು, ಮಹಾ ಬಳಲಿದಂತೆ ನರಳುತಾ ಮಲಗಿ ಇರಲು; ಎಂದಿನಂತೆ ಆ ಗೂಗೆರಾಜನು ಆ ರಾತ್ರಿಯಲ್ಲು ಸಮಸ್ತ ಪ್ರಜೆ ಪರಿವಾರವಂ ಕೂಡಿ ಕೊಂಡು, ಆ ಮೇಘವರ್ಣನ ಮೇಲೆ ದಂಡೆತ್ತಿ ಬರಲು; ಆ ಮೇಘವರ್ಣನಂ ಕಾಣದೆ, ಓಡಿ ಹೋದನೆಂದು, ತಿರುಗಿ ಬರುತ್ತಂ ಇರಲು; ಅಲ್ಲಿ ಮಲಗಿ ಕೊಂಡು ನರಳುತಿರ್ದ ಈ ಚಿರಂಜೀವಿಯಂ ಕಂಡು, ಆ ಗೂಗೆರಾಜನು ತನ್ನ ಪ್ರಧಾನರು ಸಹಾ ಬಂದು, ನೀನು ಇಲ್ಲಿ ಬಿದ್ದು ಇರುವ ಕಾರಣವೇನೆಂದು, ಕೇಳಲು; ಆ ಚಿರಂಜೀವಿ ಇಂತೆಂದಂ—ಮೇಘವರ್ಣನೆಂಬ ವಾಯುಸರಾಜನು ಮಹಾ ಮೂ

ರ್ಣನು; ನಾನು, ಗೂಗೆರಾಜನಂ ಕಂಡು ಬದುಕುವಾ! ಎಂದು, ಹೇಳಲು, ಆತಂ ಕೇಳದೆ, ತನ್ನ ಪ್ರಧಾನರಂ ಕೂಡಿ ಕೊಂಡು, ನನ್ನನ್ನು ಮಹಾ ಘಾಸಿ ಮಾಡಿ ಹೋದರು ಎಂದು, ಹೇಳೆ; ಆ ಗೂಗೆರಾಜಂ ತನ್ನ ಪ್ರಧಾನರ ಕೂಡೆ, ಈ ಮಾತು ಕಪಟವೋ? ಎಂದು, ಕೇಳಲು; ಆ ಗೂಗೆರಾಜನ ಪ್ರಧಾನಿ ರಕ್ತಾಕ್ಷನಿಂತೆಂದಂ—ಈ ಚಿರಂಜೀವಿಯು ಮೇಘವರ್ಣನ ಮುಖ್ಯ ಪ್ರಧಾನನು, ಆತನ ಮರ್ಮಕರ್ಮವನ್ನೆಲ್ಲಾ ಬಲ್ಲಾತನು; ಈತನ ನಾವು ರಕ್ಷಿಸಿ, ಈತನಿಂದಲೇ ಆ ಮೇಘವರ್ಣನ ಮೇಲೆ ರಾಜಕಾರ್ಯವ ಮಾಡ ಬಹುದು; ಇದೀಗ ತೋರಿದ ಯೋಚನೆ ಎನಲು; ಆ ಧೂಮ್ರಾಕ್ಷನೆಂಬ ಪ್ರಧಾನಿಯಿಂತೆಂದಂ—ಇವನು ಸಹಜದಿಂದ ಬಂದನೋ? ಕಪಟದಿಂದ ಬಂದನೋ? ಕಾಣ ಬಾರದು; ನಾವು ಇವನ ದೊಡ್ಡಿತನಂ ಮಾಡಿ ರಕ್ಷಿಸಿದರೆ ನಮಗೆ ಹಿತವಾ ಮಾಡನು; ತನ್ನ ಒಡೆಯನ ಕಾರ್ಯವನೇ ಮಾಡುವನು; ಹೀಗೆ ಕಪಟವ ಮಾಡಿ ಕೊಂಡು, ಕಾರ್ಯವ ಕೆಡಿಸಿದವರು ಎಷ್ಟು ಮಂದಿ ಉಂಟು! ಎನಲು; ಅದೆಂತೆನೆ—

## ೬ನೇ ಕಥೆ.

### ತನ್ನ ಗುಣವ ಬಿಡದ ಇಲಿಯು.

ಕರ್ನಾಟಕ ದೇಶದಲ್ಲು ತುಂಗಭದ್ರಾತಟಾಕದಲ್ಲು ಜಲಪಾದನೆಂಬ ಋಷೀಶ್ವರನು ಉಗ್ರ ತಪಸಂ ಮಾಡುತ್ತಿರಲಾಗಿ; ಒಂದು ದಿವಸ ಆ ಋಷೀಶ್ವರನು ಸ್ನಾನಮಂ ಮಾಡಿ, ಆಚಮನಕ್ಕೆ ಉದಕವ ತೆಗದು ಕೊಂಬ ಸಮಯದಲ್ಲು ಒಂದು ವಾಯಸಂ ಮೂಸಿಕನಂ ಕಚ್ಚಿ ಕೊಂಡು, ಗಗನ ಮಾರ್ಗದಲ್ಲು ಹೋಗುತ್ತಂ ಇರಲು; ಆ ಮೂಸಿಕಂ ಈ ಋ

ಷೀಶ್ವರನ ಕೈಯಲ್ಲು ಬೀಳಲು; ಆ ಋಷಿಯು ಇದಂ ಕಂಡು, ತನ್ನ ಕೈಯೊಳಗೆ ಬಿದ್ದ ಮೇಲೆ ಮತ್ತೆ ಇಲಿಯಾಗ ಬಾರದೆಂದು, ಮಂತ್ರ ಮಂ ಜಪಿಸುತ್ತಾ ಉದಕಮಂ ತಳಿಯಲು; ಅದು ಓರ್ವ ರೂಪವತಿ ಯಾದ ಸ್ತ್ರೀಯಾಗಿ, ನಿಂದು ಇರಲು; ಆ ಋಷೀಶ್ವರಂ, ಈಕೆಯನ್ನಾ ರಿಗೆ ಕೊಡುವೆನೆಂದು, ಯೋಚಿಸಿ ಕೊಂಡು, ಈ ಕನ್ಯಕೆಯಂ ಸೂ ರ್ಯ್ಯಗೆ ಕೊಡ ಬೇಕೆಂದು, ಆ ಕನ್ಯಕೆಯಂ ಕರಕೊಂಡು, ಸೂರ್ಯ್ಯ ನ ಬಳಿಗಂ ಹೋಗಿ, ಈ ಕನ್ಯಕೆಯ ಪರಿಗ್ರಹಿಸು! ಎನಲು; ಆತನು— ನನ್ನ ದುಃಖವ ನಾನೇ ಬಲ್ಲೆನು; ಮೇಘಂಗಳು ಮುಸುಕಿದ ಗಗನಕ್ಕೆ ತೇಜಸ್ಸು ಇಲ್ಲಾ, ಅದರಿಂದ ಮೇಘನೇ ದೊಡ್ಡವನು; ಆತಂಗೆ ಕೊಡು! ಎನಲು; ಆ ಮಾತಂ ಕೇಳಿ, ಆ ಮೇಘದ ಬಳಿಗಂ ಬಂದು, ಈ ಕನ್ಯ ಕೆಯಂ ಸ್ವೀಕರಿಸಿ ಕೊಳ್ಳು! ಎನಲು; ಆ ಮೇಘ ಇಂತೆಂದಂ—ನಾನು ವಾಯುವಿನಿಂದ ಘಾಸಿಯಾಗುತ್ತಾ ಐದೇನೆ, ನನ್ನಿಂದ ವಾಯುವೇ ದೊಡ್ಡವನು; ಆತಗೆ ಕೊಡು! ಎನಲು; ಆ ವಾಯು ಇದ್ದೆಡೆಗಂ ಬಂ ದು—ನೀನು ಜಗದ್ವಸ್ತುವಿಗೆಲ್ಲಾ ದೊಡ್ಡವನು; ಈ ಕನ್ಯಕೆಯಂ ಸ್ವೀ ಕರಿಸು! ಎನಲು; ತಾನು ಉದಯಾಸ್ತಮಾನ ತಿರುಗುತ್ತಾ ಐದೇನೆ, ಈ ಸ್ತ್ರೀಯಂ ಕೂಡಿ ಕೊಂಡು ತಿರುಗುವದಕ್ಕೆ ಸ್ವಸ್ಥವಿಲ್ಲಾ; ಪರ್ವತದ ಬಳಿಯಲ್ಲು ಸುಖದಲ್ಲು ಇದ್ದಾಳು; ಆ ಪರ್ವತಕ್ಕೆ ಕೊಡು! ಎನಲು; ಆ ಪರ್ವತದ ಬಳಿಗಂ ಬಂದು, ಈಕೆಯಂ ಸ್ವೀಕರಿಸಿ ಕೊಳ್ಳು! ಎನಲಾ ಗಿ; ಆ ಪರ್ವತ ಇಂತೆಂದುದು—ತಾವು ಲೋಕಕ್ಕೆ ಇದ್ದ ಬಳಿಯಲ್ಲಿ ಯೇ ಇದ್ದು ದೊಡ್ಡವರಾಗಿ ಇದ್ದಾರೆಂಬರು; ತಮ್ಮ ಸಂಕಟವ ತಾವೇ ಬಲ್ಲೆವು; ಹೆಗ್ಗಣಗಳ ಬಾಧೆಯಿಂದ ಈಗ ಆಗ ಬಿದ್ದೆವು ಎಂಬ ಹಾಗೆ ಐಧೇವೆ; ನಾವೇನ ಮಾಡುವೆವು? ಎನಲಾಗಿ; ಆ ಋಷಿಯು ಚಿಂತಾ ಕ್ರಾಂತನಾಗಿ ಈ ಕನ್ಯಕೆಯಂ ಯಾರಿಗೆ ಕೊಟ್ಟೇವೆಂದರೂ ಒಲ್ಲರು; ಇದಕೆ ಇನ್ನೇನು ದೋಷವುಂಟು? ಎಂದು, ಆ ರಾತ್ರೆಯಲ್ಲು ಆ ಪರ್ವ ತದ ತಪ್ಪಲಲ್ಲು ಮಲಗಲು; ಆ ಸ್ತ್ರೀಯು, ತನ್ನ ಸ್ವಪ್ನದಲ್ಲು ಇಲಿಯ ರೂಪವು ಬಂದು, ಪ್ರಯಾಸಂ ಬಡಿಸುತಿದೆನಲು; ಆ ಋಷಿ ಮಹಾ ಕೋಪದಿಂದ—ಮೊದಲು ನೀನು ಇಲಿಯಾದ ರೂಪವ ಬಿಡಿಸಿ, ಸ್ತ್ರೀ

ಯ ಮಾಡಲಾಗಿ, ಮತ್ತು ನಿನ್ನ ನಿಜ ಸ್ವಭಾವ ಬಿಡೆಯಾ? ಎಂದು, ಮೊದಲಿನ ಹಾಗೆ ಇರು! ಎಂದು, ಶಾಪವಂ ಕೊಟ್ಟು, ತನ್ನ ಆಶ್ರಮಕ್ಕೆ ಹೋದಂ.

ಅದು ಕಾರಣ ದುರ್ಜನರಿಗೆ ಉಪಕಾರವ ಮಾಡಿದರೆ ತಮ್ಮ ಅವಗುಣಂಗಳಂ ಬಿಡರು! ಎಂದು, ಹೇಳಿ, ಮತ್ತಿಂತೆಂದುದು—

## ೭ನೇ ಕಥೆ.

ಕೆಟ್ಟವರ ಸಂಗತಿಯಿಂದ ಕೇಡು ಬರುವದು.

ಬ್ರಹ್ಮಪುರವೆಂಬ ಅಗ್ರಹಾರದಲ್ಲು ಪುಣ್ಯಶೀಲನೆಂಬ ಒಬ್ಬ ಬ್ರಾಹ್ಮಣನು ಇರುವನು; ಆತನ ಮನೆಯಲ್ಲು ಒಂದು ದುಷ್ಟ ಗೋವು ಹೊಲನ ಹೊಕ್ಕು, ತಿನ್ನುತ್ತಂ ಇರಲು; ಮತ್ತೊಂದು ಗೋವು ಇದನ್ನು ಕಂಡು—ನೀನು ಮಹಾ ಪುಷ್ಟಿಯಾಗಿ ಇದ್ಧೀ, ನಾನು ಈ ರೀತಿ ಬಡವಾಗಿ ಇದ್ಧೇನೆ ಎಂದು, ಹೇಳಲು; ಆ ದುಷ್ಟವಾಗಿ ಇದ್ದಂಥಾ ಗೋವು ತನ್ನ ನಿಜ ವೃತ್ತಾಂತಮಂ ಹೇಳಿ, ನಾಳೆ ತನ್ನ ಸಂಗಡ ಬಾ! ಎಂದು, ಹೇಳಿ, ಆ ಮರು ದಿವಸ ಈ ಗೋವನ್ನು ಕೂಡಿ ಕೊಂಡು, ಹೋಗಿ, ಒಳ್ಳಿತಾಗಿ ಇದ್ದಂಥ ಹೊಲನ ತಿನ್ನುತ್ತಂ ಇರಲು; ಆ ಹೊಲನ ಒಡೆಕಾರರು ಕಂಡು, ಅಟ್ಟಿ ಕೊಂಡು ಬರಲು; ಈ ದುಷ್ಟ ಗೋವು ಸಿಕ್ಕದೆ, ಓಡಿ ಹೋಯಿತು; ಈ ಬಡತನವಾಗಿ ಇದ್ದಂಥ ಗೋವು ಅಲ್ಲಿಯೇ ಮೇಯುತ್ತಾ ಇರಲು; ಅದನ್ನು ಸಾವ ರೀತಿಯಲ್ಲು ಕೊಂದು, ಆ ಗೋವಿನ ಒಡೆಯಗೆ ಹೇಳಿ, ಒಂದು ಕಾಷ್ಟವಮಂ ಕಟ್ಟಿಸಿದರು.

ಅದು ಕಾರಣ ದುರ್ಜನರ ಸಂಗವ ಮಾಡಿದರೆ ಈ ಮರಿಯಾದೆಯೆಂದು, ಹೇಳಲು; ಆ ಕ್ರೂರಾಕ್ಷನೆಂಬ ಪ್ರಧಾನ ಇಂತೆಂದಂ—ಅವಿವೇಕವನುಳ್ಳ ಮಿತ್ರನಿಗಿಂತ ವಿವೇಕವನುಳ್ಳ ಶತ್ರುವೇ ಒಳ್ಳೆಯುವನು; ಅದೆಂತೆನೆ—

## ೮ನೇ ಕಥೆ.

ಕೋತಿಯು ಮಿತ್ರನಾಗಿದ್ದರೂ ಅರಸನನ್ನು ಕೊಂದದ್ದು.

ಗೌರಿಪುರವೆಂಬ ಪಟ್ಟಣದಲ್ಲು ಸುಗ್ರೀವನೆಂಬ ರಾಯಂ ರಾಜ್ಯವನ್ನಾಳುತ್ತಂ ಇರಲು; ಆ ರಾಯಂ ಆವನಾನೊಬ್ಬ ಮನುಷ್ಯನನ್ನು ನಂಬದೆ, ಒಂದು ವಾನರನಂ ಸಾಕಿ ಕೊಂಡು, ಅದಕ್ಕೆ ಸರ್ವ ಶೃಂಗಾರವಂ ಮಾಡಿ, ತನ್ನ ಮೈಗಾವಲಂ ಮಾಡಿ ಕೊಂಡು, ಇರಲು; ಒಂದು ದಿವಸ ರಾಯಂ ಮಣಿಮಯವಾದ ಮಂಚದ ಮೇಲೆ ಮಲಗಿ, ಇರಲು; ಆ ರಾಯನ ಮೈಯ ಮೇಲೆ ಹತ್ತೆಂಟು ನೊಣಗಳು ಮುತ್ತಿ ಕೊಂಡು, ಇರಲು; ಆ ವಾನರಂ ಕಂಡು, ತನ್ನ ಸ್ವಾಮಿಯ ಮೇಲೆ ನೊಣ ಮುತ್ತ ಬಹುದೇ? ಎಂದು, ಆ ನೊಣವಾ ಕೊಲ್ವೆನೆಂದು, ಕತ್ತಿಯಲ್ಲು ಹೊಯ್ಯಲಾಗಿ; ಆ ರಾಯಂ ಪಂಚತ್ವವನ್ನೈದಿದನು.

ಅದು ಕಾರಣ ಮಿತ್ರನಾಗಿದ್ದರೂ ಅವಿವೇಕದವನ ಕೂಡೆ ಸ್ನೇಹವ ಮಾಡಿದರೆ ಹೀಗೆ! ಎಂದು, ಮತ್ತಿಂತೆಂದಂ—

## ೯ನೇ ಕಥೆ.

ಕಳ್ಳನು ವೈರಿಯಾಗಿದ್ದರೂ ವಿಪ್ರನ ಜೀವವನ್ನುಳಿಸಿದ್ದು.

ಕಣ್ವಪುರವೆಂಬ ಪಟ್ಟಣದಲ್ಲು ಧರ್ಮಶೀಲನೆಂಬ ರಾಯಂ ಸುಖದಿಂದ ರಾಜ್ಯವನಾಳುತ್ತಂ ಇರಲು; ಆ ರಾಯಂಗೆ ಬಹು ದಿನದ ಮೇಲೆ ಒಬ್ಬ ಕುಮಾರಂ ಹುಟ್ಟಲಾಗಿ, ರಾಯಂ ಮಹಾ ಸಂತೋಷಮಂ ಬಟ್ಟು, ಜಾತಕರ್ಮ ನಾಮಕರಣಂಗಳಂ ಮಾಡಿ, ತನ್ನ ಪುರೋಹಿತಂ ಕರದು, ನಿನಗೇನು ಬೇಕು? ಎಂದು, ಕೇಳಲು; ನನಗೇನೂ ಬೇಡಾ, ಅಪೂರ್ವವಾದ ಒಂದು ರತ್ನಮಂ ಕೊಡು ಎಂದು, ಕೇಳಲು; ಆ ರಾಯಂ ಒಂದು ರತ್ನಮಂ ಕೊಡಲು; ಅದಂ ಇಸ ಕೊಂಡು, ಹೊಟ್ಟೆಯ ಒಳಯಿಂಕೆ ನುಂಗಿ, ಊರಿಗೆ ಹೋಗುತ್ತಂ ಇರಲು; ಈ ವೃತ್ತಾಂತಮಂ ಒಬ್ಬ ಕಳ್ಳನು ಕಂಡು, ಬಂದು—ಎಲೇ ಬ್ರಾಹ್ಮಣಾ, ದಿವ್ಯ ರತ್ನ

ವನ್ನು ನುಂಗಿ ಕೊಂಡು ಹೋಗುತ್ತಾ ಇದ್ಧೀ; ಬೇಗ ಉಗುಳು, ನಿನ್ನ ಕೊರಳಂ ಕೊಯ್ಯುವೆ! ಎನಲಾಗಿ; ಆ ಬ್ರಾಹ್ಮಣಂ ತನ್ನೊಳು ಆಲೋಚಿಸಿ ಕೊಂಡು, ಮಹಾ ಧೈರ್ಯವಂತನಾಗಿ—ನನಗೆಲ್ಲಿಯ ರತ್ನವಿದ್ಧೀತು? ನೀನು ಕಳ್ಳನು, ನಿನ್ನ ಹೊಟ್ಟೆಯ ಒಳಗೆ ಹತ್ತು ರತ್ನವ ನುಂಗಿ ಕೊಂಡು ಇದ್ಧೀ; ಅದನ್ನು ಉಗುಳು! ಎನಲು; ಒಬ್ಬರಿಗೊಬ್ಬರು ವಾಗ್ವಾದವಂ ಮಾಡಿ ಕೊಂಡು, ಕೊಂದಾಡುತ್ತಾ ಇರಲಾ ಸಮಯದಲ್ಲು ಮತ್ತು ಹತ್ತೆಂಟು ಮಂದಿ ಕಳ್ಳರು ಬರುತ್ತಂ ಇರಲು; ಇವರ ಮಾತಂ ಕೇಳಿ, ಅವರಿಬ್ಬರಂ ಹಿಡಿದು—ನಿನ್ನಲ್ಲಿ ಹತ್ತು ರತ್ನ, ನಿನ್ನಲ್ಲಿ ಒಂದು ರತ್ನ; ಹೀಗೆ ಹನ್ನೊಂದು ರತ್ನವಂ ಉಗುಳಿ! ಇಲ್ಲವೆ ಇಬ್ಬರಂ ಕೊಲುವೆವು! ಎಂದು, ಖಡ್ಗವಂ ನೆಗಹಲು; ಆ ಕಳ್ಳನು ಯೋಚಿಸಿ ಕೊಂಡು—ಈ ಬ್ರಾಹ್ಮಣನ ಹೊಟ್ಟೆಯ ಒಳಗೆ ರತ್ನವು ಇರುವದು ಸತ್ಯ, ನನ್ನಲ್ಲಿ ರತ್ನವಿಲ್ಲ; ಈ ಬ್ರಾಹ್ಮಣನ ಕೊಂದು, ತೆಗದು ಕೊಂಡ ಮೇಲೆ, ನನ್ನಲ್ಲಿ ಇಲ್ಲಾ ಎಂದರೂ ಕಳ್ಳನೆಂದರಿತು, ಬಡಿದು, ಹೊಟ್ಟೆಯನ್ನೇ ಬಗಿಯದೆ ಬಿಡರು, ಹ್ಯಾಗಾದರೂ ಕೊಂದಾರು; ಮೊದಲು ತಾನೇ ಕೆಡಿಸಿ ಕೊಳ್ಳಲು, ತನ್ನಲ್ಲಿ ರತ್ನ ಇಲ್ಲದಿರ್ದುದಂ ಕಂಡು, ಆ ಬ್ರಾಹ್ಮಣನಂ ಬಿಟ್ಟಾರು; ಅದು ಕಾರಣದಿಂ ತಾನು ಸತ್ತರೆಯೂ ಈ ಬ್ರಾಹ್ಮಣನ ಉಳುಹ ಬೇಕು ಎಂದು, ನಿಶ್ಚೈಸಿ—ತನ್ನ ಹೊಟ್ಟೆಯ ಒಳಗೆ ರತ್ನ ಇದ್ದರೆ ಈ ಬ್ರಾಹ್ಮಣನಂ ಕೊಲ್ಲಿ! ಅಲ್ಲವೆ ಕೊಲ್ಲ ಬೇಡಾ! ಎಂದು, ಹೇಳಲು; ಆ ಕಳ್ಳರು ಈ ಕಳ್ಳನ ಹೊಟ್ಟೆಯಂ ಬಗದು, ನೋಡಲಾಗಿ; ಅಲ್ಲಿ ರತ್ನ ಇಲ್ಲದೆ ಇರಲು; ಇದು ಹುಸಿಯೆಂದು, ಆ ಬ್ರಾಹ್ಮಣನಂ ಬಿಟ್ಟು, ಕಳುಹಿದರು.

ಅದು ಕಾರಣ ವಿವೇಕಿ ಶತ್ರುಗಳ ಗುಣ ಹೀಗೆ, ಅವಿವೇಕಿ ಮಿತ್ರರ ಕೂಡಣ ಸ್ನೇಹ ಹಾಗೆ ಎಂದು, ಹೇಳಿ—ಈ ಚಿರಂಜೀವಿಯು ತಮ್ಮ ಅರಸನ ಕೈಯಿಂದ ನೊಂದು, ಬಂದು ಇದ್ಧಾನೆ; ನಮಗೆ ಹಿತವಾಗಿ ಇದ್ಧಾನೆ; ನಾವು ಈತನ ಕರದು ಕೊಂಡು ಹೋಗ ಬೇಕು! ಎಂದು, ಹೇಳಲು; ವಕ್ರಾಕ್ಷನೆಂಬ ಪ್ರಧಾನ ಇಂತೆಂದಂ—

## ೧೦ನೇ ಕಥೆ.

ನರಿಗಳು ಬುದ್ಧಿಯಿಂದ ಕಪಟೋಪಾಯಕ್ಕೆ ತಪ್ಪಿಸಿ ಕೊಂಡದ್ದು.

ನರ್ಮದಾನದಿಯ ತೀರದಲ್ಲು ವಸುಮತಿಯೆಂಬ ಪಟ್ಟಣದಲ್ಲು ಹೇಮದತ್ತನೆಂಬ ಬ್ರಾಹ್ಮಣನು ತೋಟವ ಮಾಡಿ ಕೊಂಡು, ಅಲ್ಲಿ ಖರ್ಜೂರವ ಬಿತ್ತಿ ಇರಲು; ಅದು ಮಹಾ ಫಲವಾಗಿ, ಬೆಳದು ಇರಲು; ನಾನಾ ಜಂಬುಕಂಗಳು ಬಂದು, ಆ ಫಲವ ತಿಂದು, ಕೆಡಿಸಲಾಗಿ; ಆ ಬ್ರಾಹ್ಮಣಂ ಮಹಾ ಚಿಂತಾಕ್ರಾಂತನಾಗಿ, ಈ ಜಂಬುಕಂಗಳನ್ನು ಕೊಲ್ಲ ಬೇಕೆಂದು, ಒಂದು ದಿವಸ ತನ್ನ ಎಡಗೈಯಲ್ಲು ಬುತ್ತಿಯನಿರಿಸಿ ಕೊಂಡು, ಬಲಗೈಯಲ್ಲು ಒಂದು ದೊಣ್ಣೆಯಂ ಹಿಡ ಕೊಂಡು, ಸತ್ತ ಮರಿಯಾದೆಯಲ್ಲು ಮಲಗಿ ಇರಲು; ಈ ಜಂಬುಕಂಗಳು ಬಂದು, ಈ ಬ್ರಾಹ್ಮಣನ ಇಂಗಿತಂಗಳಂ ಕಂಡು, ಸತ್ತ ಶ್ರವದ ಕೈಯಲ್ಲು ಬುತ್ತಿಯೂ ದೊಣ್ಣೆಯೂ ಇರುವದು ಆಶ್ಚರ್ಯವೆಂದು, ತಮ್ಮೊಳು ಆಲೋಚಿಸಿ ಕೊಂಡು, ಊರ ಮುಂದಕ್ಕೆ ಬಂದು, ಅಳುವ ಧ್ವನಿ ಉಂಟೇ? ಎಂದು, ನೋಡಲು; ಅಲ್ಲಿ ಕಳಕಳವಂ ಕಾಣದೆ, ಈ ಬ್ರಾಹ್ಮಣನು ನಮ್ಮ ಕೊಲ್ಲುವದಕ್ಕೆ ಉಪಾಯಮಂ ಮಾಡಿ ಕೊಂಡು ಇದ್ದಾನೆ ಎಂದು, ಇನ್ನು ಇಲ್ಲಿಗೆ ಬರ ಬಾರದು ಎಂದು, ಆ ನರಿಗಳು ಆ ಸ್ಥಳವನ್ನೇ ಬಿಟ್ಟು ಹೋದವು.

ಅದು ಕಾರಣದಿಂದ ಈ ಚಿರಂಜೀವಿ ಕಪಟದಿಂದ ಐದಾನೋ? ಏನೋ? ತಿಳಿವದಿಲ್ಲಾ; ಈತನ ಇರಿಸಿ ಕೊಳ್ಳ ಬಾರದು! ಎಂದು, ಹೇಳಲು; ಆ ದೀಪ್ತಾಕ್ಷನೆಂಬ ಪ್ರಧಾನ ಇಂತೆಂದಂ—ನಷ್ಟಂ ಬಟ್ಟವನುದ್ಧರಿಸುವದೂ ಬಡದ ಕೆರೆಯ ಕಟ್ಟಿಸುವದೂ ಕೆಟ್ಟು ಮುರಿದು ಬಂದಂಥಾ ಅರಸಗೆ ಅಂಜ ಬೇಡ ಎಂದು ನಂಬುಗೆಯುಂ ಕೊಡುವದೂ ಶರಣು ಹೊಕ್ಕವರ ತಲೆ ಗಾವದೂ, ಇಷ್ಟು ಗುಣವುಳ್ಳಂಥ ಪುರುಷನು ಪುಣ್ಯವಂತನೆನಿಸಿ ಕೊಂಬನು; ಇಂ

ತೆಂಬ ನೀತಿ ಉಂಟಾಗಿ, ತನ್ನ ಮರೆ ಹೊಕ್ಕವರ ಕಾಯ
ಬೇಕು! ಎಂದು, ಆ ಪ್ರಧಾನಂ ಹೇಳಲು; ಆ ಗೂಗೆರಾ
ಜಂ ಈತನ ಮಾತಂ ಕೇಳಿ, ಆ ಚಿರಂಜೀವಿಯನ್ನು ತ
ನ್ನ ಸ್ಥಳಕ್ಕೆ ಕರದೊಯ್ದು, ಅತ್ಯಂತ ಪ್ರೇಮದಿಂದ ಕೂ
ಡಿ ಕೊಂಡು, ಇರಲು; ಆ ಚಿರಂಜೀವಿಯು ಗೂಗೆರಾಜ
ನ ಆತನ ಪ್ರಧಾನರ ನಡವಳಿಕೆಗಳನ್ನೂ ಅವರೆಲ್ಲರ ಬ
ಳಗಣ ಇಚ್ಛೆ ಬಿಡಿಸಿ ಕೊಂಡು ಗೂಗೆಗಳಅಂತಸ್ಥವನ್ನೂ
ಅರಿತು, ಅವರು ಇರುವ ಗುಹೆಗಳ ಖಂಡಿಯನ್ನು ನೋ
ಡಿ ಕೊಂಡು, ಆ ಖಂಡಿಗಳಂ ಮುಚ್ಚಿ, ಇದಕ್ಕೆ ತಕ್ಕ
ಪ್ರಯತ್ನವಂ ಕಾಣ ಬೇಕೆಂದು, ಅಲ್ಲಿಂದ ಬಿಟ್ಟು ತನ್ನ
ಒಡೆಯನಾದ ಮೇಘವರ್ಣನ ಬಳಿಗಂ ಬಂದು— ಆ ಗೂ
ಗೆರಾಜನ ಬಿಲವನ್ನು ತಾನು ಮುಚ್ಚಿ ಬಂದು ಇದ್ದೇನೆ;
ಇನ್ನು ಜಾಪ್ಯವ ಮಾಡ ಬಾರದು, ಇನ್ನು ತ್ವರಿತದಲ್ಲಿ
ಇಂದೇ ಕಾರ್ಯವ ಮಾಡ ಬೇಕು! ಎಂದು, ಹೇಳಿ, ತ
ನ್ನ ಒಡೆಯನಾದ ಮೇಘವರ್ಣಂಗೆ ಬಿನ್ನಹವಂ ಮಾಡಿ,
ಸಮಸ್ತ ಪ್ರಜೆ ಪರಿವಾರವೆಲ್ಲವುಂ ಕೂಡಿ ಕೊಂಡು, ಸ
ರ್ವರ ಕೈಯಲ್ಲು ಹುಲ್ಲ ಕಟ್ಟೆಗೆಯಂ ಹೊರಿಸಿ ಕೊಂಡು,
ತಾನು ಬೆಂಕಿಯಂ ಕಚ್ಚಿ ಕೊಂಡು, ಆ ಗೂಗೆರಾಜ ಇ
ರುವ ಗುಹೇ ಬಾಗಿಲಲ್ಲಿಗಂ ಬಂದು, ಈ ತಂದಂಥ ಹುಲ್ಲ
ಕಟ್ಟೆಗೆಯಂ ಒಟ್ಟಿ, ಕಿಚ್ಚಂ ಹಾಕಲು; ಆ ಗುಹೆಯೊಳ
ಗೆ ಇದ್ದಂಥ ಗೂಗೆರಾಜನು, ಆತನ ಪ್ರಜೆ ಪರಿವಾರ
ಪ್ರಧಾನರು ಸಹ, ಎಲ್ಲರು ಪಂಚತ್ವವನ್ನೈದಲು; ಇತ್ತಲಾ
ಮೇಘವರ್ಣನೆಂಬ ವಾಯಸರಾಜಂ, ತನ್ನ ವೈರಿಯಾದ
ಗೂಗೆರಾಜನು ಸತ್ತು ಹೋದನು ಎಂದು, ಮಹಾ ಸಂ

ತೋಷದಿಂದ ತನ್ನ ಸ್ಥಳಕಂ ಬಂದು, ಈ ಚಿರಂಜೀವಿಗೆ ಸಪ್ತಾಂಗವಮಂ ಕೊಟ್ಟು, ಸುಖದಲ್ಲಿ ಇರ್ದನು.

# ೪ನೇ ತಂತ್ರ.

## ಲಬ್ಧವಾದ್ದು ಕಳದು ಕೊಂಡು ಹೋದ್ದೆಂಬ ಲಬ್ಧಪ್ರಣಾಶವು.

ದಕ್ಷಿಣ ಸಮುದ್ರದ ತೀರದಲ್ಲಿ ಒಂದು ವನಾಂತರ ದೊಳಗೆ ಒಂದು ನೇರಳೆಮರ ಇರುವದು; ಆ ಮರನ ಮೇಲೆ ವೈರಿಮುಖನೆಂಬ ವಾನರರಾಜಂ ಆ ನೇರಳೆಫಲ ಮಂ ಭಕ್ಷಿಸಿ ಕೊಂಡು, ಬಹು ಕಾಲ ಪರಿಯಂತರದಲ್ಲಿ ಸುಖದಿಂದ ಇರಲು; ಆ ಸಮುದ್ರದ ಒಳಗೆ ವಿಕರಾಲಮು ಖನೆಂಬುದೊಂದು ಮೊಸಳೆಯು ಇರುವದು; ಒಂದು ದಿವ ಸ ಆ ವಾನರರಾಜಂ ಆ ನೇರಳೇ ಫಲವಂ ಭಕ್ಷಿಸುತ್ತ ಇ ರಲಾಗಿ; ಒಂದು ಹಣ್ಣು ಸಮುದ್ರದೊಳಗೆ ಬೀಳಲಾಗಿ; ಆ ಮೊಸಳೆಯು ಆ ಫಲವಂ ಭಕ್ಷಿಸಿ, ಅದರ ಸ್ವಾದುವಂ ಕಂಡು, ವಿಸ್ಮಯಂ ಬಟ್ಟು, ಈ ವಾನರನ ಕೂಡೆ ಸ್ನೇಹ ವಿಶ್ವಾಸವಂ ಮಾಡ ಬೇಕು! ಎಂದು, ಮತ್ತಿಂತೆಂದು ದು—ಉತ್ತಮನಾಗಿ ಇದ್ದಂಥಾ ಪುರುಷನು ಪರೋಪಕಾ ರವ ಮಾಡಿದರೆ ಆತಗೆ ಸಂಪತ್ತು ಹೆಚ್ಚುವದು; ಅದಕ್ಕೆ ದೃಷ್ಟಾಂತವಾವುದೆಂದರೆ, ಬೀಸಣಿಗೆ ಯಾವ ಪ್ರಕಾರದಲ್ಲಿ ಪರರಿಗೆ ಸುಖ ಕೊಡುತ್ತಾ ಬಪ್ಪೀತೋ, ಉತ್ತಮರ ಗುಣ ವು ಅದೇ ಪ್ರಕಾರ ಎಂದು, ಮತ್ತಿಂತೆಂದಂ—ಸಂಗತಿಗಳಾ

ಗಿ ಇದ್ದವರು ಅನ್ಯೋನ್ಯ ಪ್ರೀತಿಯಲ್ಲಿ, ಇಬ್ಬರು ಸರಿಯಾಗಿ ಒಂಧೇ ಮನಸ್ಸಿನಲ್ಲಿ ಇರ ಬೇಕು; ಅದಕ್ಕೆ ನಿದರುಶನವೇನೆಂದರೆ, ಸ್ತನಗಳು ಯಾವ ಮರಿಯಾದೆಯಲ್ಲು ಎರಡು ಸಮವಾಗಿ ಶಿಶುಗಳಿಗೆ ಸುಖವ ಕೊಡುತ್ತಾ ಅವೆಯೋ, ಉತ್ತಮರಾದವರು ಅದೇ ಪ್ರಕಾರದಲ್ಲಿ ಇರ ಬೇಕು ಎಂದು, ಮತ್ತಿಂತೆಂದಂ—ಉತ್ತಮರ ಕೂಡಣ ಸ್ನೇಹ, ಅಧಮರ ಕೂಡಣ ಸ್ನೇಹ ಹ್ಯಾಗೆ ಅಂದರೆ, ಉತ್ತಮನ ಕೂಡಣ ಸ್ನೇಹವು ಮೊದಲು ಅಲ್ಪವಾಗಿ, ಕಡೆಯಲ್ಲಿ ದೊಡ್ಡದಹುದು; ಅಧಮನ ಕೂಡಣ ಸ್ನೇಹ ಮೊದಲು ದೊಡ್ಡದಾಗಿ, ಕಡೆಯಲ್ಲಿ ಅಲ್ಪವಾಗುವದು; ಅದಕ್ಕೆ ನಿದರುಶನವೇನು ಅಂದರೆ—ವೃಕ್ಷದ ನೆಳಲು ಉದಯಕ್ಕೆ ದೊಡ್ಡದಾಗಿ, ಮಧ್ಯಾಹ್ನಕ್ಕೆ ಸಣ್ಣದಹುದು; ಅಧಮನ ಕೂಡಣ ಸ್ನೇಹವು ಅದೇ ಪ್ರಕಾರ;—ಮಧ್ಯಾಹ್ನದಲ್ಲಿ ಸಣ್ಣದಾಗಿ ಇದ್ದ ನೆಳಲು ಹೊತ್ತು ಹೋಗುತ್ತಾ ಹೆಚ್ಚಿ, ಅಸ್ತಮಯಕ್ಕೆ ದೊಡ್ಡದಹುದು; ಅದೇ ಪ್ರಕಾರ ಉತ್ತಮನ ಕೂಡಣ ಸ್ನೇಹವು ಹೆಚ್ಚುವದು ಎಂದು, ಆ ಮೊಸಳೆಯು ಈ ವಾನರನ ಸಮೀಪಕ್ಕಂ ಬಂದು, ಮಹಾ ಭಯಭಕ್ತಿಯಿಂದ ಕೈ ಮುಗಿದು, ವಿನಯಪರನಾಗಿ—ನೀನು ಮಹಾ ದಿವ್ಯ ಪುರುಷನು; ನಿನ್ನ ಕೂಡ ಮಿತ್ರತ್ವವ ಮಾಡ ಬೇಕೆಂತ ನಾನು ಬಂದೆನು ಎನಲಾಗಿ; ಆ ವಾನರರಾಜಂ ಮಹಾ ಸಂತೋಷಮಂ ಬಟ್ಟು—ಇದು ಉತ್ತಮ, ಇದರ ಕೂಡ ಸ್ನೇಹವ ಮಾಡ ಬೇಕೆಂದು, ತನ್ನೊಳು ಆಲೋಚಿಸಿ ಕೊಂಡು, ಒಂದಕ್ಕೆ ಒಂದು ಐಕ್ಯವಾಗಿ, ಈ ವಾನರನೂ ಆ ಮೊಸಳೆಯೂ ಇರುತ್ತಂ ಇರಲು; ಈ

ವಾನರನು ಆ ಮೊಸಳೆಗೆ ದಿನಂಪ್ರತಿಯಲ್ಲು ಫಲಂಗಳಂ
ಕೊಟ್ಟು, ಮಹಾ ಹರುಷದಿಂದ ಅನೇಕ ಕಾಲ ಪರಿಯಂ
ತರದಲ್ಲು ಈ ಮೊಸಳೆಯು ತನ್ನ ಸ್ತ್ರೀ ಪುತ್ರ ಮಿತ್ರರಂ
ಬಿಟ್ಟು, ಈ ವಾನರನ ಸ್ನೇಹದಿಂದ ಇರಲು;

ಈ ಮೊಸಳೆಯ ಸತಿಯು ತನ್ನ ಪುರುಷ ಅಗಲಿದು
ದಂ ಕಂಡು, ಮಹಾ ವಿರಹತಾಪದಿಂದ ಚಿಂತಾಕ್ರಾಂತೆ
ಯಾಗಿ, ತನ್ನ ಪುರುಷ ಯಾವಲ್ಲಿ ಇದ್ಧಾನೋ? ಎಂದು,
ಒಬ್ಬ ದೂತಿಯಂ ಕರದು, ಅರಸಿ ಕರತಾರಿ! ಎಂದು, ಕ
ಳುಪಲು; ಆ ದೂತಿಯು ಅರಸುತ್ತ ಬಂದು, ಈ ಮೊಸ
ಳೆಯಂ ಕಂಡು, ಅದರ ಕೂಡ—ನಿನ್ನ ಸ್ತ್ರೀಯು ನೀನು
ಅಗಲಿದ ಅನು ಎಂದೂ ಮಹಾ ಚಿಂತಾಕ್ರಾಂತೆಯಾಗಿ
ಇಧಾಳೆ; ನೀನು ಸರ್ವಥಾ ಬರ ಬೇಕು! ಎಂದು ಕರೆಯ
ಲು; ಆ ಮೊಸಳೆಯು, ತನಗೆ ಆಪ್ತನಾಗಿ ಇದ್ದಂಥಾ ನಂ
ಟನ ಬಿಟ್ಟು ಬರಲಾರೆನು ಎನಲಾಗಿ; ಆ ದೂತಿಯು ಆ
ಸ್ತ್ರೀಯ ಬಳಿಗಂ ಹೋಗಿ—ಎಲೇ ಸ್ತ್ರೀಯೇ, ನಿನ್ನ
ಪುರುಷನು ವಾನರರ ಸಂಗತಿಯಂ ಮಾಡಿ ಕೊಂಡು, ಅ
ವರ ಕೂಡ ಅತಿ ಪ್ರೇಮವಾಗಿ ಇದ್ಧಾನೆ ಎನಲು; ಆ
ಸ್ತ್ರೀಯು ಈ ವೃತ್ತಾಂತವಂ ಕೇಳಿ, ಮಹಾ ದುಃಖಾ
ಕ್ರಾಂತೆಯಾಗಿ, ಆ ವಾನರನ ಕೊಲ್ಲ ಬೇಕೆಂದು, ನಿಶ್ಚೈ
ಸಿ, ಮತ್ತಾ ದೂತಿಯಂ ಕರದು—ನನಗೆ ಮಹಾ ಸಂಕ
ಟಂ ಆಗಿ ಅದೆ; ಸತ್ತು ಹೋಗುತ್ತೇನೋ? ಏನೋ? ಎಂ
ತಾ ಕಾಣದು; ಮಹಾ ಸಂಕಟವಾಗಿ ಅದೆ ಎಂದು, ಈ
ಮಾತಂ ಹೇಳಿ, ಕರತಾ! ಎಂದು, ಕಳುಪಲು; ಆ ದೂತಿ
ಯು ತಿರುಗಿ ಮೊಸಳೆಯ ಬಳಿಗಂ ಬಂದು—ನಿನ್ನ ಸ್ತ್ರೀ

ಗೆ ಮಹಾ ಉಪದ್ರವಾಗಿ, ಸಂಕಟದಿಂದ ಬದುಕಲರಿಯು ಳು; ನೀನು ಬಂದರೆ ಉಳಿದಾಳು, ಬಾರದೆ ಇದ್ದರೆ ಉಳಿ ಯಲರಿಯಳು! ಎಂದು, ಮತ್ತಿಂತೆಂದಳು—ನಿನ್ನ ಸ್ತ್ರೀ ಯು ಬಿದಿಗೆಯ ಚಂದ್ರಮನಂತೆ ಮಹಾ ಬಡವಾಗಿ ಇ ದ್ದಾಳೆ, ಅಗ್ನಿಯಿಂದಲೂ ಚಿಂತಾಗ್ನಿ ವಿಶೇಷವಾಯಿತು; ಈ ಮರಿಯಾದೆಯಲ್ಲಿ ಮಹಾ ಸಂಕಟವಾಗಿ ಇರುತ್ತ ದೆ ಎನಲು; ಆ ಮಾತಂ ಕೇಳಿ, ಆ ಮೊಸಳೆಯು ಆ ವಾನ ರನ ಬಳಿಗಂ ಬಂದು, ಈ ವೃತ್ತಾಂತವಂ ಹೇಳಿ—ನನ್ನ ಸ್ತ್ರೀಗೆ ಬಹಳ ಸಂಕಟವಾಗಿ ಇದ್ದೀತಂತೆ; ನಾನು ಹೋ ಗಿ, ನಾಲ್ಕು ಮೂರು ದಿನದ ಒಳಗೆ ಬರುತ್ತೇನೆ ಎನಲು; ಆ ಮರ್ಕಟಂ ಕೇಳಿ – ಲೋಕದ ಒಳಗೆ ಸಂಸಾರಕ್ಕೆ ಸ್ತ್ರೀಯಿಂದಲೇ ಸೌಖ್ಯ; ನೀನು ನಿನ್ನ ಸ್ತ್ರೀಯ ಬಳಿಗೆ ಹೋಗಿ, ಔಷಧಿಕಷಾಯವಂ ಮಾಡಿ, ಆ ತರುವಾಯ ಬಾ ಎಂದು, ಕಳುಪಲು; ಆ ಮೊಸಳೆಯು—ಆಗಲಿ ಎಂದು, ಬ ರುತ್ತೇನೆ ಎಂತಾ, ಕಳುಹಿಸಿ ಕೊಂಡು, ತನ್ನ ಗೃಹಕ್ಕಂ ಬಂದು, ತನ್ನ ಸ್ತ್ರೀಯಂ ಕಂಡು, ಆಕೆಯಂ ಆರೈದು, ಲೇಪಕ್ಕೆ ಏನು ಔಷಧಿ ಬೇಕು? ಎಂದು, ಕೇಳಲು; ಆ ಸ್ತ್ರೀಯು—ಇದು ನನ್ನ ಲೇಪಕ್ಕೆ ಬಂದು ವಾನರನಂ ಕೊಂದು, ಅದರ ರಕ್ತದ ಲೇಪವಂ ಮಾಡ ಬೇಕು! ಎ ನಲಾಗಿ;

ಆ ಮೊಸಳೆಯು, ಹಾಗಾಗಲಿ! ಎಂದು, ಈ ವಾನರ ನ ಬಳಿಗಂ ಬಂದು—ಎಲೇ ವಾನರರಾಜಾ, ತನ್ನ ಸ್ತ್ರೀ ಗೆ ಗುಣವಾಯಿತು, ಅದೆಲ್ಲಾ ನಿನ್ನ ಧರ್ಮವು; ಇಷ್ಟು ದಿವಸ ಪರಿಯಂತರ ನಾನು ನಿನ್ನ ಕೂಡೆ ಮಹಾ ಸ್ನೇಹ

ವಾಗಿ ಇದ್ದೆನು; ನೀನು ಬಂದು ಸಾರಿ ನನ್ನ ಮನೆಗೆ ಬಂದು, ತನ್ನ ಪುತ್ರ ಮಿತ್ರರಂ ನೋಡಿ, ತನ್ನ ಮನೆಯಲ್ಲ್ಲಿ ಊಟವ ಮಾಡಿ ಕೊಂಡು, ನಾಲ್ಕು ದಿವಸ ಇದ್ದು, ಬರ ಬಹುದು; ಸರ್ವಥಾ ನನ್ನ ಮೇಲೆ ಸ್ನೇಹ ಉಂಟಾದರೆ ಬರ ಬೇಕು! ಎಂದು, ಕರೆಯಲು; ಆ ವಾನರಂ ಮಹಾ ಸಂತೋಷವಂ ಬಟ್ಟು, ತನ್ನ ಸ್ನೇಹಿತನ ಗುಣಕ್ಕೆ ಹೋಗ ಬೇಕು ಎಂದು, ಈ ಮೊಸಳೇ ಬೆನ್ನ ಮೇಲೆ ತಾನು ಏರಿ ಕೊಂಡು, ಬರಲು; ಆ ಮೊಸಳೆಯು ತನ್ನ ಗೃಹಕ್ಕಂ ಕರ ತಂದು, ಮಹಾ ಸನ್ಮಾನವಂ ಮಾಡಿ, ಮೂರು ನಾಲ್ಕು ದಿನ ಇಟ್ಟು ಕೊಂಡು ಇರಲು; ಇದರ ಶರೀರವು ಘಟ್ಟಿಯಾಗಿ ಇರಲಾಗಿ, ಆ ಮೊಸಳೆಯು ಈ ಮರ್ಕಟನ ಕರದು—ನಿನ್ನ ಕೊಂದು, ನಿನ್ನ ರಕ್ತದಲ್ಲು ನನ್ನ ಸ್ತ್ರೀಗೆ ಔಷಧಿಯು ಮಾಡ ಬೇಕು ಎಂದು, ಹೇಳಲಾಗಿ; ಈ ವಾನರಂ ಯೋಚಿಸಿ ಕೊಂಡು—ಇದು ದುರ್ಜನನ ಸಂಗದಿಂದ ಹೀಗಾಯಿತು, ಇದು ಸರ್ವಥಾ ಕೊಲ್ಲದೆ ಬಿಡದು; ಇದಕ್ಕೆ ಬಂದು ಉಪಾಯವಂ ಕಾಣ ಬೇಕು ಎಂದು, ಆ ಮೊಸಳೆಯಂ ಕರದು—ತನ್ನ ಶರೀರ ಆ ಮರನ ಮೇಲೆ ಇದ್ಧೀತು, ಇದು ಕಪಟದ ಶರೀರವಲ್ಲವೇ? ಎಲೇ ಹುಚ್ಚಾ, ಹೀಗೆ ಎಂತ ನೀನು ಅಂದೇ ಹೇಳ ಬೇಡವೇ? ಈಗ ಆದರೂ ಏನಾಯಿತು? ಆ ಶರೀರವನ್ನೇ ಕೊಂಡು ಬಂದೇನು; ತಿರಿಗಿ ಹೋಗುವಾ! ಬಾ! ಎಂದು, ಕರೆಯಲು; ಆ ಮೊಸಳೆಯು ಮಂದ ಮತಿಯಿಂದ, ಈ ಮಾತು ಕಪಟಾ ಎಂದು, ಅರಿಯದೆ, ಹಾಗಾಗಲಿ! ಎಂದು, ಈ ಮರ್ಕಟನ ತನ್ನ ಬೆನ್ನ ಮೇಲೆ ಏರಿಸಿ ಕೊಂಡು, ಆ ವೃಕ್ಷದ ಬಳಿಗಂ ಬಂದು, ನಿಲ್ಲಲು;

ಆ ವಾನರಂ ಬೇಗಾ ಹೋಗಿ, ಆ ಮರನ ಏರಿ ಕೊಂಡು—ನೀನು ಮಹಾ ಪುರುಷನು, ಬಹು ಬಳ್ಳೆ ಮನುಷ್ಯನು! ಮಹಾತ್ಮನ ಕೂಡ ಸ್ನೇಹವ ಮಾಡಿದೆನು! ಎಂದು, ಮತ್ತಿಂತೆಂದುದು—ತನ್ನ ಅರ್ಥವನರಿಯದೆ ವೆಚ್ಚವ ಮಾಡುವವನು, ತನ್ನ ಸತ್ತ್ವವನರಿಯದೆ ಜಗಳವ ಮಾಡುವವನು, ಪರರ ಗುಣಂಗಳನರಿಯದೆ ಸ್ನೇಹ ಮಾಡುವವನು, ಆವದೊಂದು ಕಾರ್ಯವನು ವಿಚಾರಿಸದೆ ಮಾಡುವವನು, ಅಂಥಾ ಮನುಷ್ಯನು ತನ್ನಿಂದ ತಾನೇ ಕೆಟ್ಟು ಹೋಗುವನು ಎಂದು, ಮತ್ತಿಂತೆಂದುದು—

## ೧ನೇ ಕಥೆ.

### ಬುದ್ಧಿಹೀನ ಕತ್ತೆಯು ಜೀವ ಹೋದ್ದು.

ಪ್ರೇಮಧರನೆಂಬ ವನಾಂತರದಲ್ಲು ಪಿಂಗಳಾಕ್ಷನೆಂಬ ಸಿಂಹರಾಜಂ; ಆತಂ ಬುದ್ಧಿಯುಕ್ತನೆಂಬ ಪ್ರಧಾನಂ ಸಹಿತ ತನ್ನ ಭುಜಬಲಪರಾಕ್ರಮದಿಂದ ಸುಖದಲ್ಲು ಇರಲು; ಆ ಸಿಂಹಕ್ಕೆ ವ್ಯಾಧಿ ಬಂದು, ಈ ಪ್ರಧಾನನ್ನು ಕರದು—ತನ್ನ ಆಹಾರಕ್ಕೆ ಒಂದು ಗರ್ದಭನಂ ತಂದು ಕೊಟ್ಟರೆ ಉಳಿದೇನು; ಇಲ್ಲದಿದ್ದರೆ ಉಳಿಯಲರಿಯೆನು ಎಂದು, ಹೇಳಲು; ಆ ಪ್ರಧಾನಂ ಕಳುಹಿಸಿ ಕೊಂಡು, ಬಂದು, ಒಂದು ಹಳ್ಳದ ದಂಡೆಯಲ್ಲು ಒಬ್ಬ ಅಗಸನ ಕತ್ತೆಯು ಮೇಯುತ್ತಾ ಇರಲು; ಅದರ ಸಮೀಪಕ್ಕಂ ಬಂದು—ಎಲೇ ಗರ್ದಭನೇ, ನಿನಗೆ ನಮ್ಮ ಸಿಂಹರಾಜನ ಪ್ರಧಾನಿಕೆಯಂ ಕೊಡಿಸ್ಯೇನು; ನೀನು ಇಲ್ಲಿ ಮೊಟ್ಟೆ ಹೊತ್ತು ಕೊಂಡು ಸಾಯ ಕೆಲಸವಿಲ್ಲಾ! ಎಂತಾ, ಆ ಗರ್ದಭಗೆ ನಾನಾ ಬೋಧನೆಯಂ ತುಂಬಿ, ಅದನ್ನು ಕರಕೊಂಡು ಬಂದು, ಸಿಂಹರಾಜನ ಮುಂದೆ ನಿಲ್ಲಿಸಲು; ಆ ಗರ್ದಭಂ ಈ ಸಿಂಹರಾಜನಂ ಕಂಡು, ಭೀತಿಯಿಂದ ತಾನು ಮೊದಲು ಮೇಯುತ್ತಾ ಇದ್ದ ಹಳ್ಳಕ್ಕಂ ಓಡಿ ಬರಲು; ಆ ಸಿಂಹರಾಜಂ ತನ್ನ ಪ್ರಧಾನನಂ ಕರದು, ನೀನು ಕರ ತಂದ ಕತ್ತೆಯು ಓಡಿ

ಹೋಯಿತು! ಇನ್ನೊಮ್ಮೆ ಕರ ತಾ! ಎನಲು; ಆ ಗರ್ದಭನ ಬಳಿಗಂ ಬಂದು—ಎಲೇ ಹುಚ್ಚಾ, ನೀನೇಕೆ ಓಡಿ ಬಂದಿ? ನಿನಗೆ ಅನೇಕ ಪದವಿಯಂ ಕೊಡಿಸ್ಯೇನಲ್ಲ? ಎಂದು, ಅನೇಕ ಲಲನೆಯ ಮಾತನಾಡಿ, ಕರಕೊಂಡು ಹೋಗಿ, ಆ ಸಿಂಹದ ಕೈಯಲ್ಲು ಕೊಟ್ಟು, ಕೊಲ್ಲಿಸಿ, ತಾವು ಈರ್ವರು ಭಕ್ಷಿಸಿದರು.

ಅದು ಕಾರಣಾ ನಾನು ಅವಿವೇಕ ಬುದ್ಧಿಯಿಂದ ಸಿಕ್ಕಿ, ನನ್ನ ಬುದ್ಧಿವಂತಿಕೆಯಿಂದ ಬಿಡಿಸಿ ಕೊಂಡು ಬಂದೆನು, ಇನ್ನು ಸಿಕ್ಕುವರೆ ಆ ಗರ್ದಭನ ಹಾಗೆ ನಾನು ಹುಚ್ಚನೇ? ಎಂದು, ಮತ್ತಿಂತೆಂದುದು—

## ೨ನೇ ಕಥೆಯ ಮೊದಲಿನ ಭಾಗ.

ಬ್ರಾಹ್ಮಣನು ಪಡ ಕೊಂಡದ್ದು ಮರುಳಾದ ಅತ್ಯಾಶೆಯಿಂದ ಹೋದ್ದು.

ಅವಂತಿಕಾಪುರವೆಂಬ ಪಟ್ಟಣದಲ್ಲು ಸುಧರ್ಮನೆಂಬ ಬ್ರಾಹ್ಮಣನು ಮಹಾ ವಿದ್ಯಾಸಂಪನ್ನನು; ಮಹಾ ದಾರಿದ್ರದಿಂದಾ ಇರುವನು. ಆ ಬ್ರಾಹ್ಮಣನು ದಿನಚರಿಯಲ್ಲು ಪ್ರಾತಃಕಾಲದಲ್ಲು ಎದ್ದು, ನದಿಯ ತೀರಕ್ಕಂ ಹೋಗಿ, ಸ್ನಾನವಂ ಮಾಡಿ ಕೊಂಡು, ಅಲ್ಲಿ ಸಂಧ್ಯಾಮಂಟಪದಲ್ಲು ವೇದಶಾಸ್ತ್ರವನೋದಿ ಕೊಳ್ಳುತ್ತಾ ಇರಲು; ಅಲ್ಲಿ ಒಂದು ಸರ್ಪನು ಈ ಬ್ರಾಹ್ಮಣನ ಅಧ್ಯಯನಮಂ ಕೇಳಿ, ಮಹಾ ಸಂತೋಷದಿಂದ ಇದ್ದು, ಈ ಪ್ರಕಾರದಿಂದ ಕೆಲವು ಕಾಲಾ ಕಳಿಯಲು; ಈ ಬ್ರಾಹ್ಮಣನು ಹತ್ತು ಎಂಟು ದಿವಸದ ಪರಿಯಂತರದಲ್ಲು ಹಳ್ಳಿಪಳ್ಳಿಯಲ್ಲು ಯಾಚಕತನವಾ ಮಾಡಿ ಕೊಂಡು ಬರುವದಕ್ಕೆ ಹೋಗಿ, ಇರಲು; ಈ ಸರ್ಪನು ಮಹಾ ಚಿಂತಾಕ್ರಾಂತನಾಗಿ, ಅಧ್ಯಯನದ ಮಂಜುಲ ಸ್ವರಮಂ ಕೇಳದ ಜನ್ಮ ವ್ಯರ್ಥವೆಂದು, ಚಿಂತಿಸುತ್ತಾ ಇರಲು; ಆ ಮರುದಿವಸ ಆ ಬ್ರಾಹ್ಮಣ ಬಂದು, ಎಂದಿನಂತೆ ನದಿಯಲ್ಲು ಸ್ನಾನಮಂ ಮಾಡಿ ಕೊಂಡು, ಆ ಸಂಧ್ಯಾಮಂಟಪದ ಬಳಿಯಲ್ಲು ಕುಳಿತು ಓದುತ್ತಾ ಇರುವ ಸಮಯದಲ್ಲು ಆ ಸರ್ಪನು ಬಂದು—ಎಲೇ ಬ್ರಾಹ್ಮಣಾ, ಹತ್ತೆಂಟು ದಿನದ

ಆರಭ್ಯ ಏನು ಮಾಡುತ್ತಾ ಇದ್ದಿ? ಎಲ್ಲಿಗೆ ಹೋಗುತ್ತಾ ಇದ್ದಿ? ಎನಲು; ನಾನು ನನ್ನ ದಾರಿದ್ರದಿಂದ ಯಾಚಕವೃತ್ತಿಗೆ ಪರ ಊರಿಗೆ ಹೋಗಿ, ಇದ್ದೆನು ಎನಲು; ಇಂದು ಮೊದಲಾಗಿಯೂ ನೀನು ಎಲ್ಲಿಗೂ ಹೋಗ ಬೇಡಾ, ನೀನು ಇಲ್ಲಿಯೇ ಇರು; ದಿನಕ್ಕೆ ಒಂದು ರತ್ನಮಂ ನಿನಗೆ ಕೊಟ್ಟೇನು, ನನಗೆ ಶಾಸ್ತ್ರಶ್ರವಣ ಹೇಳುತ್ತಾ ಬಾ! ಎನಲು; ಈ ಬ್ರಾಹ್ಮಣನು ಮಹಾ ಸಂತೋಷಮಂ ಬಟ್ಟು, ದಿನಂಪ್ರತಿಯಲ್ಲು ಒಂದು ರತ್ನಮಂ ಇಸಕೊಂಡು, ತನ್ನ ಸಂಸಾರಮಂ ಮಾಡಿ ಕೊಂಡು, ಕೆಲವು ಕಾಲಾ ಕಳಿಯಲು; ಆ ಬ್ರಾಹ್ಮಣಂಗೆ ಕೆಲವು ಕಾಲಕ್ಕೆ ಜಡತ್ವ ತೋರಲಾಗಿ; ಮುಂದಣ ಮುಕ್ತಿಯಂ ಘಳಿಸ ಬೇಕು ಎಂದು, ತನ್ನ ಮಗನಂ ಕರದು—ನೀನು ದಿನಂಪ್ರತಿಯಲ್ಲು ಈ ಸರ್ಪಗೆ ಶಾಸ್ತ್ರಮಂ ಹೇಳಿ, ಒಂದು ಒಂದು ರತ್ನಮಂ ಇಸಕೊಂಡು, ಸುಖದಲ್ಲು ಇರು ಎಂದು, ಹೇಳಿ, ಆ ಸರ್ಪಗೂ ತನ್ನ ಮಗಗೂ ಕಟ್ಟಳೆಯಂ ಮಾಡಿ, ತಾನು ಕಾಶಿಯಾತ್ರೆಯಂ ಹೋಗಲು; ಈ ಬ್ರಾಹ್ಮಣನು ಮೊದಲು ತನ್ನ ತಂದೆ ಹೇಳಿದ ಹಾಗೆ ದಿನಂಪ್ರತಿಯಲ್ಲು ಈ ಸರ್ಪಗೆ ಶಾಸ್ತ್ರಮಂ ಓದಿ ಕೊಂಡು, ಒಂದೊಂದು ರತ್ನವ ಇಸಕೊಂಡು, ತನ್ನ ಗೃಹಕ್ಕೆ ಸಂತೋಷದಿಂದ ಬರುತ್ತಂ ಇರಲು; ಒಂದು ದಿವಸ ಆ ಪಟಂಗನಾದ ಯೌವನಸ್ಥನು ಹೋದ ಒಬ್ಬ ವೇಶ್ಯಾಸ್ತ್ರೀಯು ಈ ಬ್ರಾಹ್ಮಣನ ರತ್ನಂಗಳಂ ಕಂಡು, ಅವನ ಕೂಡ—ನಿನಗೆ ಇಂಥಾ ರತ್ನ ಎಲ್ಲಿಯದು? ಎಂದು, ಕೇಳಲು; ಆತನು ತನ್ನ ವೃತ್ತಾಂತಮಂ ಹೇಳಲಾಗಿ; ಆ ವೇಶ್ಯಾಸ್ತ್ರೀಯು—ಆ ಸರ್ಪಗೆ ದಿನಚರಿಯಲ್ಲು ಅಧ್ಯಯನ ಮಾಡಿ, ಒಂದು ರತ್ನಮಂ ಇಸುಕೊಂಡು ಬರ ಬೇಕಷ್ಟೇ; ಹೀಗಾದರೆ ಏನೂ ಪುರುಷಾರ್ಥವಿಲ್ಲಾ; ಎಂದಿನಂತೆ ನೀನು ನಾಳೆ ಹೋಗಿ, ಆ ಸರ್ಪಗೆ ಶಾಸ್ತ್ರಮಂ ಹೇಳಿ, ಆ ಸರ್ಪನು ಬರಲು ಅದಂ ಕೊಂದು, ಅದರ ಹೊಟ್ಟೆಯ ಒಳಗೆ ಇದ್ದಷ್ಟು ರತ್ನಮಂ ಒಂದೇ ಸಾರಿ ತೆಗದು ಕೊಂಡು ಬಾ! ಎಂದು, ದುರ್ಬುದ್ಧಿ ಹೇಳಿ, ಕಳುಪಲು; ಆತನು ಆ ಮಾತಂ ಕೇಳಿ, ಹಾಗೆ ಹೌದು! ಎಂದು, ತಿಳಿದು ಕೊಂಡು, ಮರುದಿವಸ ಈ ಬ್ರಾಹ್ಮಣಂ ಒಂದು ಕತ್ತಿಯಂ ತೆಗದು ಕೊಂಡು, ಆ ಸರ್ಪನ ಒಳಿಗಂ ಬಂದು, ಅಧ್ಯಯನಶ್ರವಣಮಂ ಹೇಳಿ, ಬೇಡಿ ಕೊ

ಳ್ಳಲು; ಎಂದಿನಂತೆ ಆ ಸರ್ಪನು ಹೊರಟು ಬಂದು, ರತ್ನವ ಕೊಟ್ಟೀನು ಎಂಬ ಅನಕದಾ ಈ ಬ್ರಾಹ್ಮಣಂ, ಕತ್ತಿಯಲ್ಲು ಹೊಯ್ಯ ಬೇಕು ಎಂದು, ನೇವರಲಾಗಿ; ಆ ಸರ್ಪನು ತಪ್ಪಿಸಿ ಕೊಂಡು, ತನ್ನ ಬಿಲದ್ವಾರಮಂ ಹೊಕ್ಕು, ಒಂದು ರತ್ನಮಂ ಎಂದಿನಂತೆ ಕೊಡುವ ಹಾಗೆ ಅದರ ಮೇಲೆ ವಿಷಜ್ವಾಲೆಯಾಗಿ ಉಗುಳಲು; ಈ ಬ್ರಾಹ್ಮಣಂ ಆ ರತ್ನಮಂ ತೆಗದು ಕೊಂಡು, ಬರುತ್ತಿರಲಾಗಿ; ದಾರಿಯಲ್ಲು ಆ ವಿಷಜ್ವಾಲೆಯು ತಾಗಿ, ಆ ಬ್ರಾಹ್ಮಣನು ಪಂಚತ್ವವನೈದಲು; ಆ ಬ್ರಾಹ್ಮಣನ ಹೆಂಡರು ಮಕ್ಕಳು ಸುದ್ದಿಯಂ ಕೇಳಿ, ಬಂದು, ಮಹಾ ದುಃಖಾಕ್ರಾಂತರಾಗಿ, ಆತನ ಸಂಸ್ಕರಿಸಿ, ಹೋಗಲು; ಕೆಲವು ದಿವಸಕ್ಕೆ ಆ ಸುಧರ್ಮನೆಂಬ ಬ್ರಾಹ್ಮಣನು ಕಾಶಿಯಾತ್ರೆಯಂ ಹೋಗಿ, ಕಾವಡಿಯಂ ಹೊತ್ತು ಕೊಂಡು, ಮಹಾ ಸಂತೋಷದಿಂದ ತನ್ನ ಗೃಹಕ್ಕಂ ಬರಲು; ತನ್ನ ಸ್ತ್ರೀ ಮಿತ್ರರೆಲ್ಲಾ ಶೋಕವ ಮಾಡುತ್ತಂ ಇರಲು; ಅದನ್ನು ಕಂಡು, ಈತ, ಏನಾಯಿತು? ಎಂದು, ಹೇಳಲು; ನೀನು ಸರ್ಪಗೆ ಶಾಸ್ತ್ರವ ಓದುವ ಹಾಗೆ ನಿನ್ನ ಮಗಗೆ ಕಟ್ಟಳೆಯಂ ಮಾಡಿ, ಹೋಗಿ, ಇದ್ದಿ; ಅದರಿಂದ, ಆ ಸರ್ಪನು ದೃಷ್ಟವಾಗಿ, ಸತ್ತು ಹೋದನು ಎನಲು; ಆ ವಿಪ್ರ ಇಂತೆಂದಂ—ಸಮಸ್ತ ವಿದ್ಯಂಗಳ ಕೇಳಲಾಗಿ ಬುದ್ಧಿಪ್ರಕಾಶವಹುದು, ವೆಸನದಿಂದ ಮೂರ್ಖನಹನು, ಯೌವನಮದದಿಂದ ಸ್ತ್ರೀಯು ಉಬ್ಬುವಳು, ಮಹಾ ನದಿಯು ಉದಕದಿಂದಲೇ ಹೆಚ್ಚುವದು, ಧೃತಿಯಿಂದ ಯೋಗಶುದ್ಧಿಯಹುದು, ನೀತಿಯಿಂದ ಅರಸುಗಳು ಆಗುವರು; ಅದು ಕಾರಣ ತನ್ನ ಮಗನು ವೆಸನದಿಂದ ಕೆಟ್ಟು ಹೋದನು; ಆ ಸರ್ಪನಿಂದ ಏನೂ ದೋಷವಿಲ್ಲಾ! ಎಂದು, ಹೇಳಿ, ಮಜ್ಜನ ಭೋಜನಾದಿಗಳಂ ಮಾಡಿ ಕೊಂಡು, ಆ ಮರು ದಿವಸ ಆ ಸರ್ಪನ ಬಳಿಗಂ ಬಂದು, ಎಂದಿನಂತೆ ಶಾಸ್ತ್ರಶ್ರವಣಮಂ ಹೇಳಲಾಗಿ; ಆ ಸರ್ಪ ಇಂತೆಂದುದು—ಎಲೇ ಬ್ರಾಹ್ಮಣಾ, ನೀನೇಕೆ ನನ್ನ ಬಳಿಗೆ ಬಂದಿ? ನಿನ್ನ ಮಗನು ನನ್ನ ಕತ್ತಿಯಲ್ಲಿ ಹೊಯಿದಂಥಾ ಘಾಯವು ನನ್ನ ಶರೀರದಲ್ಲು ಇದ್ದಾವು; ನನ್ನ ಶಿಟ್ಟಿನಿಂದ ನಿನ್ನ ಮಗನು ಪಂಚತ್ವವನೈದಿದನು; ಅದರಿಂದ ನಿನಗೆ ನನ್ನ ಮೇಲೆ ವೈರಾ, ನನಗೆ ನಿನ್ನ ಮೇಲೆ ವೈರಾ; ಇನ್ನೇತರ ಸ್ನೇಹ? ಇಂದಿಗೆ ಬಂದದಕ್ಕೆ ಹೋಗು! ನಾಳೆ

ಬಂದರೆ ನಿನ್ನ ಕೊಲುವೆನು! ಎಂದು, ಸಾರಿ, ಆ ವಿಪ್ರನಂ ಕಳುಹಲಾಗಿ; ತನ್ನ ಮನೋವೇಥೆಯಿಂದ ಆ ಬ್ರಾಹ್ಮಣಂ ಮನೆಗೆ ಬಂದು, ತನ್ನ ನೆಂಟರಿಷ್ಟರ ಕೂಡೆ ಇಂತೆಂದಂ—

## ೩ನೇ ಕಥೆ.

### ಆಶೆಯು ತೃಪ್ತಿ ಪಡದು.

ಧಾರಾಪುರವೆಂಬ ಪಟ್ಟಣದಲ್ಲು ಭೋಜರಾಜನೆಂಬ ರಾಯಂ ತನ್ನ ಭುಜಬಲಪರಾಕ್ರಮದಿಂದ ರಾಜ್ಯವನಾಳುತ್ತಂ ಇರಲು; ಆ ರಾಯಂ ಒಂದು ದಿವಸ ರಾತ್ರೆಯಲ್ಲು, ತನ್ನ ಪಟ್ಟಣದ ವೃತ್ತಾಂತಮಂ ನೋಡಬೇಕೆಂದು, ಕರಿಯ ಕಂಬಳಿಯನ್ನು ಹೊದ್ದು ಕೊಂಡು, ಬಂದು, ಒಬ್ಬ ದರಿದ್ರ ಬ್ರಾಹ್ಮಣನ ಮನೆಯ ಬಾಗಿಲ ಮುಂದೆ ನಿಲ್ಲಲು; ಆ ಮನೇ ಬ್ರಾಹ್ಮಣಂ ಮಹಾ ದರಿದ್ರತನದಿಂದ, ತನ್ನ ಸ್ತ್ರೀಯಂ ಕರದು—ನಾಳೆ ನನ್ನ ತಂದೆಯ ಪೈತೃಕಾ; ಮೂರು ಉದ್ದಿನ ಕಾಳಷ್ಟು ಚಿನ್ನವಾದರೂ, ಶ್ರಾದ್ಧಂ ಮಹಾ ಸಾಧ್ಯವಾದೀತು ಎನಲು; ಮೂರು ಉದ್ದಿನ ಕಾಳಷ್ಟು ಚಿನ್ನವಾ ಕೊಡುವಂಥ ಸೌಭಾಗ್ಯರು ಯಾರೂ ಇಲ್ಲವೆಂದು, ಚಿಂತಿಸುತ್ತಂ ಇರಲು; ಆ ಮಾತನು ರಾಯನು ಕೇಳಿ, ತನ್ನ ಅರಮನೆಗಂ ಹೋಗಿ, ಮರು ದಿವಸ ಆ ಬ್ರಾಹ್ಮಣನಂ ಕರೇ ಕಳುಹಿಸಿ—ಎಲೇ ಬ್ರಾಹ್ಮಣಾ, ನಿನ್ನೆ ರಾತ್ರೆಯಲ್ಲು ಮೂರು ಉದ್ದಿನ ಕಾಳಷ್ಟು ಚಿನ್ನವಾದರೆ ಪೈತೃಕಾ ಆದೀತೆಂದು, ಮಹಾ ಚಿಂತೆಯಂ ಬಟ್ಟೆಯಲ್ಲಾ? ಇಂದು ನಿನ್ನ ಮನಸ್ಸಿಗೆ ಬಂದಷ್ಟು ದ್ರವ್ಯಮಂ ಬೈತನಕಾ ಕಟ್ಟಿ ಕೊಂಡು, ಹೊತ್ತು ಕೊಂಡು, ಹೋಗು! ಎಂದು, ತನ್ನ ಭಂಡಾರದ ಮನೆಗೆ ಅಪ್ಪಣೆಯಂ ಕೊಡಲು; ಈ ಬ್ರಾಹ್ಮಣಂ ಮಹಾ ಸಂತೋಷಮಂ ಬಟ್ಟು, ಅಸ್ತಮಾನ ಪರಿಯಂತರದಲ್ಲು ತನ್ನ ಮನದಣಿಯೆ ಆ ದ್ರವ್ಯಮಂ ಕಟ್ಟಿ ಕಟ್ಟಿ, ಹೊತ್ತು ಕೊಂಡು, ಹೋಗುತ್ತಂ ಇರಲು; ಆ ರಾಯಂ ಕಂಡು, ಬೆರಗಾಗಿ, ಆ ಬ್ರಾಹ್ಮಣನಂ ಕರದು—ಎಲೇ ಬ್ರಾಹ್ಮಣಾ, ಮೂರು ಉದ್ದಿನ ಕಾಳಷ್ಟು ಚಿನ್ನವಾದರೆ ಸಾಕಂತಾ ಹೇಳಿದಿ; ಇಷ್ಟು ಹೊತ್ತು ತೆಗದು ಕೊಂಡು ಹೋದ್ದು ಮೂರು ಕೋಟಿ ದ್ರವ್ಯವಾದೀ

ತು; ಇನ್ನು ನಿನ್ನ ಅಪೇಕ್ಷೆ ಇಹುದೇ? ಎನಲು; ಆ ಬ್ರಾಹ್ಮಣಂ—ಎಲೇ ರಾಯಾ, ಈ ಮನದ ಆಶೆಗೆ ಕಡೆ ಮೊದಲು ಇದ್ದೀತೇ? ಆವನಾನೊಬ್ಬ ಮನುಷ್ಯಗಾದರೂ ಎಷ್ಟು ದ್ರವ್ಯ ಇದ್ದೀತೋ, ಅಷ್ಟು ಲೋಭತ್ವವಲ್ಲದೆ ತೃಪ್ತಿಯಾಗದು! ಎನಲು; ಆ ರಾಯಂ ಮೆಚ್ಚಿ, ಆ ಬ್ರಾಹ್ಮಣಂಗೆ ಮತ್ತಷ್ಟು ದ್ರವ್ಯವಮಂ ಕೊಟ್ಟು, ಕಳುಹಿದನು.

## ೨ನೇ ಕಥೆಯ ಎರಡನೇ ಭಾಗ.

ಅದು ಕಾರಣಾ ತನ್ನ ಮಗನು ಅಪೇಕ್ಷೆಯಿಂದ ಸರ್ಪನ ಕೊಲ್ಲಲಾಗಿ, ಅದು ತನ್ನನೇ ಕೊಂದಿತು ಎಂದು, ಈ ಬ್ರಾಹ್ಮಣನು ತನ್ನ ಬಂಧುವರ್ಗದ ಕೂಡೆ ಈ ಕಥೆಯಂ ಹೇಳಿ, ಸುಖದಲ್ಲು ಇರ್ದಂ.

ಅದು ಕಾರಣ ಆ ಬ್ರಾಹ್ಮಣನ ಹಾಗೆ ವೈರವರ್ಗ ಬಿದ್ದಿತು; ಇನ್ನೇತರ ನಂಟುತನವೆಂದು, ಆ ಮರ್ಕಟನು ಮತ್ತಿಂತೆಂದುದು—

## ೪ನೇ ಕಥೆ.

ಒಬ್ಬನ ಅತ್ಯಾಶೆಯು ಪರರಿಗೆ ಸಹ ಕೇಡು ಮಾಡೀತು.

ಚಂದ್ರಾವತಿಯೆಂಬ ಪಟ್ಟಣದಲ್ಲು ನಂದಮಹೀಪಾಲನೆಂಬ ರಾಯಂ ಸುಖದಿಂದ ರಾಜ್ಯವನಾಳುತ್ತಾ ಇರಲು; ಆ ರಾಯಗೆ ವೀರವರ್ಮನೆಂಬ ಸಾಹಸಮುಳ್ಳ ಬಂಟನು ಇರುವನು; ಆ ಬಂಟಗೆ ನೇತ್ರಾವತಿಯೆಂಬ ಸ್ತ್ರೀಯು ಇರುವಳು; ಒಂದು ದಿವಸ ಈ ರಾಯಂ ಬೇಟೆಯನಾಡಿ, ರಾಜಬೀದಿಯೊಳು ಮಹಾ ಸಂತೋಷದಿಂದ ಬರುತ್ತಂ ಇರಲು; ಈ ವೀರವರ್ಮನ ಸ್ತ್ರೀಯು ಉಪ್ಪರಿಗೆಯಂ ಹತ್ತಿ, ನೋಡುತ್ತಂ ಇರಲು; ಈ ರಾಯಂ ಕಂಡು, ಮನ ಸೋತು, ತನ್ನ ಅರಮನೆಗಂ ಬಂದು, ಈ ವೃತ್ತಾಂತಮಂ ತನ್ನ ಪ್ರಧಾನನ ಕೂಡೆ ಹೇಳಲು; ಆ ಪ್ರಧಾನಿಯು—ಎಲೇ ರಾಯಾ, ನೀನು ಸಕಲವಿದ್ಯಾಪ್ರವೀಣನು; ಪರದಾರವೆಂಬುದು ಮಹಾ ನರಕಕ್ಕೆ ಭಾಜನ; ಅದರಿಂದ ಇಂಥಾ ಬುದಿಯನೆಣಿಸ ಬೇಡಾ!

ಎಸಲು; ಆ ರಾಯಂ ಇಂತೆಂದಂ—ಜಗತ್ಪಿತಾಮಹನಾಗಿ ಇದ್ದಂಥಾ ಬ್ರಹ್ಮದೇವರು ಶಾರದೆಯ ಕಟಾಕ್ಷಕ್ಕೆ ಸಿಕ್ಕಿದನಂತೆ, ವಿಷ್ಣುವು ಲಕ್ಷ್ಮಿಯ ವಿಲಾಸಪದ್ಮಕ್ಕೆ ಸಿಕ್ಕಿದನಂತೆ, ಶಿವನು ಪಾರ್ವತಾದೇವಿಯ ರೂಪವಿಭ್ರಮಕ್ಕೆ ಸಿಕ್ಕಿದನಂತೆ, ಇಂಥಾ ತ್ರೈಮೂರ್ತಿಗಳೆಲ್ಲಾ ಸ್ತ್ರೀಯರುಗಳಿಗೆ ಸಿಕ್ಕಿದರಂತೆ; ನನ್ನ ಪಾಡೇನು? ಎಂದು, ಹೇಳಿ—ಆ ಸ್ತ್ರೀಯನ್ನು ಕರಿಸಿ ಕೊಟ್ಟರೆ ಉಳಿದೇನು, ಅಲ್ಲದೆ ಇದ್ದರೆ ಉಳಿಯೆನು ಎನಲು; ಆ ಪ್ರಧಾನಂ ತನ್ನೊಳು ಆಲೋಚಿಸಿ ಕೊಂಡು, ಈ ಸ್ತ್ರೀಯನ್ನು ತಂದು ಕೊಡದೆ ಇದ್ದರೆ ಪ್ರಾಣವ ಬಿಟ್ಟಾನೆಂದು, ನಿಶ್ಚೈಸಿ, ಆ ಸ್ತ್ರೀಯ ಗಂಡನಂ ಕರದು—ನೀನು ಸಮುದ್ರಪ್ರಾಂತ್ಯಕ್ಕೆ ಹೋಗಿ, ರತ್ನಪಕ್ಷಿಯನ್ನು ಕೊಂಡು ಬಾ! ಎಂದು, ಹೇಳಿ, ಕಳುಪಲು; ಆತನು ತನ್ನ ಸ್ತ್ರಿಯಂ ಕರದು, ಈ ವೃತ್ತಾಂತಮಂ ಹೇಳಿ, ತಾನು ಸಾಕಿರ್ದ ಒಂದು ಗಿಣಿಗೂ ಒಂದು ಮಾರ್ಜಾಲಕ್ಕೂ, ತನ್ನ ಸ್ತ್ರೀಯ ಕಾದು ಇರಿ! ಎಂದು, ಕಟ್ಟು ಮಾಡಿ, ತಾನು ದ್ವೀಪಾಂತರಕ್ಕಂ ಹೋಗಲು; ಆ ದಿನ ಅಸ್ತಮಯವಾಗಲು, ಈ ರಾಯಂ ಆ ಸ್ತ್ರೀಯಿದ್ದ ಬಳಿಗಂ ಬರಲು; ಅದನ್ನು ಈ ಮಾರ್ಜಾಲನು ಕಂಡು, ಆ ಗಿಣಿಯೊಡನಿಂತೆಂದುದು—ಎಲೇ ರಾಮಾ, ನಮ್ಮ ಮನೆಗೆ ಒಬ್ಬ ಕಳ್ಳನು ಬಂದಿದ್ದಾನೆ, ನಮ್ಮ ಒಡೆಯನು ಮನೆಯಲ್ಲಿ ಇಲ್ಲಾ; ಇದಕ್ಕಿನ್ನೇನು ಉಪಾಯವೆಂದು, ಕೇಳಲು; ಆ ಗಿಳಿಯಿಂತೆಂದುದು—ಎಲೇ ಮಾರ್ಜಾಲಾ, ನೀನು ಹುಚ್ಚನೇ; ಆತಂ ನಮ್ಮ ಪಟ್ಟಣಕ್ಕೆ ಅರಸು ಆದ ನಂದಚಕ್ರೇಶ್ವರನಲ್ಲವೇ? ಆದ ಮೇಲೆ ನಮ್ಮ ರಕ್ಷಿಸುವಂಥಾ ಒಡೆಯನ ಸ್ವಾಮಿ; ಆತಗೆ ಪರನಾರಿಯರು ಸಹೋದರರೆಂಬ ಬಿರಿದು; ಆತನು ತಸ್ಕರನಲ್ಲಾ; ಇಂಥಾ ಮಹಾ ರಾಯ! ಕಣಾ? ಎಂದು, ಹೇಳಲು; ಆ ರಾಯಂ ಆ ಮಾತಂ ಕೇಳಿ, ತನ್ನೊಳು ತಾನೇ ಮಹಾ ನಾಚಿ, ತಿರುಗಿ ತನ್ನ ಅರಮನೆಗಂ ಹೋದನು.

ಅದು ಕಾರಣ ತನ್ನ ಒಡೆಯುಗೆ ಬಂದ ವಿಪತ್ತನ್ನು ಗಿಣಿಯೂ ಮಾರ್ಜಾಲನೂ ಪರಿಹರಿಸಿದವು; ಆ ಮರಿಯಾದೆಯಲ್ಲಿ ಮೊದಲು ಸಿಕ್ಕಿ, ಉಪಾಯಾಂತರದಲ್ಲಿ

ತಪ್ಪಿಸಿ ಕೊಂಡು, ಬಂದೆನು; ಇನ್ನು ನನಗೂ ನಿನಗೂ ಯಾತರ ನಂಟುತನ? ಎಂದು, ಆ ಮರ್ಕಟನು ಆ ಮೊಸಳೆಯು ಮೂದಲಿಸಿ, ನೀನು ನಿನ್ನ ಹಾಗೆ ಹೋಗು! ಎನಲು;

ಆ ಮೊಸಳೆಯು ಈ ಮರ್ಕಟನ ಕೂಡ—ನೀನು ಮಹಾ ಸತ್ಯವಂತನು! ನಿನ್ನ ಶರೀರವ ಕೊಂಡು ಬರುತ್ತೇನೆಂತಾ ವಾಗ್ದತ್ತವ ಮಾಡಿ, ಬಂದಿ; ನೀನು ಅಸತ್ಯವಂತನೇ! ಮನದಲ್ಲೂ ಮಾತಿನಲ್ಲೂ ಧಾರೆಯಲ್ಲೂ ಮೊದಲು ಕೊಟ್ಟದ್ದನ್ನು ತಿರುಗಿ ತೆಗದು ಕೊಂಬುವವನು ಅರುವತ್ತು ಸಾವಿರ ವರುಷ ಅಮೇಧ್ಯದಲ್ಲು ಕ್ರಿಮಿಯಾಗಿರುವನು; ಇಂತೆಂಬ ನೀತಿಯುಂಟಾಗಿ, ನೀನು ಮಹಾ ಅಸತ್ಯನೇ! ಎನಲು; ಆ ಮರ್ಕಟ ಇಂತೆಂದುದು—

## ೫ನೇ ಕಥೆ.

### ವೇಶ್ಯ ವೇಳ್ಯದಲ್ಲಿ ಸುಳ್ಳಾಡ ಬೇಕು.*

ಗೋದಾವರಿಯ ತೀರದಲ್ಲು ವರುಷ ಉಪವರುಷರೆಂಬಂಥಾ ಇಬ್ಬರು ಖುಷೀಶ್ವರರು ಪಂಚಾಗ್ನೀ ಮಧ್ಯದಲ್ಲಿ ಉಗ್ರ ತಪಸ್ಸಂ ಮಾಡುತ್ತಾ ಇರಲು; ಒಂದು ದಿವಸ ಆ ದಾರಿಯಲ್ಲು ಮದುವೇ ದಿಬ್ಬಣದವರು ಹೋಗಲು; ಹಿಂದಿಕ್ಕಿನಿಂದ ಕಳ್ಳರು ಬಂದು, ಇಲ್ಲಿ ಮದುವೇ ದಿಬ್ಬಣ ಹೋಯಿತೇ? ಎಂದು, ಕೇಳಲು; ಆ ಖುಷೀಶ್ವರರ ಒಳಗೆ ಒಬ್ಬ ಖುಷಿಯು—ಇವರುಗಳು ಕಳ್ಳರು, ಕಂಡರೆ ಕೊಂದಾರು ಎಂಬದನರಿತು, ನಾವು ಕಾಣಲಿಲ್ಲಾ ಎಂತಾ, ಹೇಳಲು; ಆ ಚೋರರು ಮತ್ತೊಬ್ಬ ಖುಷಿಯಂ ಕೇಳಲು; ಆ ಖುಷಿಯು, ಸತ್ಯವನ್ನೇ ಆಡ ಬೇಕು ಎಂದು, ಈ ದಾರಿಯಲ್ಲು ಹೋದರು ಎಂತಾ, ಹೇಳಲು; ಆ ಮಾತಂ ಕೇಳಿ,

* ಇದು ದೇವರ ನ್ಯಾಯಪ್ರಮಾಣಕ್ಕೆ ವಿರೋಧವಾದ ಕಥೆಯಾಗಿದೆ; ಹ್ಯಾಗೂ ಸುಳ್ಳಾಡ ಬಾರದು! ಸತ್ಯಮ್ ಏವ ಜಯತೇ!

ಆ ಕಳ್ಳರು ಹೋಗಿ, ಆ ದಿಬ್ಬಣದವರಂ ಮುತ್ತಿ ಕೊಂಡು, ಸೂರೆ ಸುಲಿಗೆಯ ಮಾಡಿ ಕೊಂಡು, ಹೋಗಲು; ಅತ್ತಲಾ ಋಷೀಶ್ವರರು ಕೆಲವು ಕಾಲದ ಮೇಲೆ ಕಾಲಕರ್ಮದಿಂದ ಪಂಚತ್ವವನ್ನೈದಲು; ಅವರಿಬ್ಬರನ್ನು ದೂತರು ಕರಕೊಂಡು ಹೋಗಿ, ಯಮನ ಮುಂದೆ ನಿಲಿಸಲು; ಆ ಯಮನು ಚಿತ್ರಗುಪ್ತರೆಂಬ ತನ್ನ ಶಾನಭೋಗರಂ ಕರಸಿ, ಇವರ ಪಾಪ ಪುಣ್ಯವೇನು? ಎಂದು, ಕೇಳಲು; ಆ ಚಿತ್ರಗುಪ್ತರು—ತಾ ಕಂಡುದು ಸತ್ಯವೆಂದು, ಒಬ್ಬ ಋಷಿ ಹೇಳಲು ಸಮಸ್ತ ಪ್ರಾಣಿಗಳನ್ನು ಹತವ ಮಾಡಿಸಿದ ಹಾಗೆ ಆಯಿತು; ಒಬ್ಬ ಋಷಿಯು, ಈ ದಾರಿಯಲು ಹೋದ್ದು ಕಾಣಲಿಲ್ಲವೆಂದು, ಅಸತ್ಯವ ಹೇಳಿದನು ಎನಲು; ಆ ಯಮನು ಹುಶಿಯ ಹೇಳಿದ ಋಷೀಶ್ವರನ ಪುಣ್ಯಲೋಕಕ್ಕೆ ಕಳುಹಿದನು.

ಅದು ಕಾರಣ ವೇಳ್ಯ ವೇಳ್ಯವನರಿದು, ಸತ್ಯಾಸತ್ಯವ ಆಡ ಬೇಕು ಎಂದು, ಮತ್ತಿಂತೆಂದಂ—ಆವನಾನೊಬ್ಬ ಮನುಷ್ಯನು ಸಂಕಟದಲ್ಲಿರುವಾಗ, ಅರಸುಗಳು ಒಬ್ಬನ ಮೇಲೆ ಮುನಿದು ಅರ್ಥ ಪ್ರಾಣವ ಕೊಂಬಾಗ, ಕಳ್ಳರು ಕಟ್ಟಿ ಕೊಲ್ಲುವಾಗ, ಬ್ರಾಹ್ಮಣರಿಗೆ ಬಂದ ವಿಪತ್ತಿನಲ್ಲಿ, ಕನ್ನಿಕೆಯ ಮದುವೆಯಾಹಲ್ಲಿ, ಇಷ್ಟು ಬಳಿಯಲ್ಲಿ ಅಸತ್ಯವನು ನುಡಿದರೆ ಅದಕ್ಕೆ ದೋಷವಿಲ್ಲಾ; ಇಂತೆಂಬ ನೀತಿಯುಂಟಾಗಿ, ತನ್ನ ಪ್ರಾಣಸಂಕಟದ ವೇಳೆಯದಲ್ಲು ಏನೆಂತಾದರೂ ನುಡಿದು, ಪ್ರಾಣವನ್ನುಳುಹಿ ಕೊಂಡು, ಬಂದೆನು; ಅದು ಕಾರಣಾ ಇನ್ನು ನಿನ್ನ ಹಾಗೆ ಹೋಗು! ಎನಲು; ಆ ಮೊಸಳೆಯು ಮಹಾ ಚಿಂತಾಕ್ರಾಂತನಾಗಿ, ತನ್ನ ಗೃಹಕ್ಕಂ ಹೋಯಿತು; ಇತ್ತಲಾ ಮರ್ಕಟನು, ದೇವಾಧೀನತೆಯಿಂದ ತಾನು ಉಳಿದೆನು ಎಂದು, ಆ ವೃಕ್ಷದ ಮೇಲೆ ಸುಖದಲ್ಲು ಇದ್ದುದು.

# ೫ನೇ ತಂತ್ರ.

## ಪರೀಕ್ಷೆಯಿಲ್ಲದೆ ಕೆಲಸ ಮಾಡಿದ್ದೆಂಬ ಅಪರೀಕ್ಷಿತಕಾರಿತವು.

ಗೌಳ ದೇಶದಲ್ಲು ದೇವಶರ್ಮನೆಂಬ ಬ್ರಾಹ್ಮಣಂ ಯಾಗಸಿದ್ಧೆಯೆಂಬ ಸತಿಯು ಸಹಾ ಸುಖದಿಂದ ಇರಲು; ಆ ಬ್ರಾಹ್ಮಣಂ ಅಲ್ಲಿ ಅಲ್ಲಿ ಯಾಚಕತನವಂ ಮಾಡಿ ಕೊಂಡು, ಬಂದು ಮಡಕೆಯಲ್ಲು ಸತ್ರದ ಹಿಟ್ಟಂ ತುಂಬಿ ಕೊಂಡು ಇರುವನು; ಈ ಪ್ರಕಾರದಿಂದ ಇರುತ್ತಿರಲಾಗಿ, ಆತನ ಸ್ತ್ರೀಯು ಗರ್ಭಿಣಿಯಾಗಿ ಇರಲು; ಬಂದಾನು ಬಂದು ದಿವಸ ಒಬ್ಬ ಗೃಹಸ್ಥನ ಮನೆಯಲ್ಲು ಪರಾನ್ನ ಊಟವಂ ಮಾಡಿ ಕೊಂಡು, ಮಹಾ ಸಂತೋಷದಿಂದ ತನ್ನ ಮನೆಗೆ ಬಂದು, ಪರಾನ್ನವಂ ಉಂಡು ಕೊಂಡು ತನ್ನ ತಾನರಿಯದೆ, ತನ್ನ ಸ್ತ್ರೀಯಂ ಕರೆದು, ಆ ಊಟದ ಮದದಿಂದ—ನಿನ್ನ ಹೊಟ್ಟೆಯೊಳಗೆ ಇರುವಂಥಾ ಗಂಡು ಮಗನನ್ನು ನೀನು ಒಳ್ಳೆ ಲಗ್ನದಲ್ಲು ಪಡವಿ; ಆತಗೆ ನಾವು ಜಾತಕರ್ಮ ನಾಮಕರಣಂಗಳಂ ಮಾಡ ಬೇಕು; ಮುಂಚೆ ಮದುವೆಯಂ ಮಾಡ ಬೇಕು; ಅದಕ್ಕೆ ರೊಖ್ಖವ ಘಳಿಸ ಬೇಕಾದರೆ ನಮ್ಮಲ್ಲಿ ಎರಡು ಮಡಕೆ ಸತ್ರದ ಹಿಟ್ಟು ಇದ್ದೀತು; ಮುಂದೆ ದುರ್ಭಿಕ್ಷಕಾಲವು ಬಂದೀತು; ಆ ದುರ್ಭಿಕ್ಷಕಾಲದಲ್ಲು ಈ ಸತ್ರದ ಹಿಟ್ಟು ಮಾರಿ, ಐವತ್ತು ನೂರು ವರಹಾನ್ನು ಘಳಿಸಿ, ಅದರಲ್ಲು ಹತ್ತೆಂಟು ಎಮ್ಮೆಯಂ ಕೊಂಡು, ಹಯನಂ ಹೇರಿ, ಅದರಿಂದ ಕೆಲ

ವು ದ್ರವ್ಯವಂ ಘೆಳಿಸ್ಯೇನು; ಆ ಮೇಲೆ ಆ ಎಮ್ಮೆಗಳು ಹಾಕಿದ ಕರುವಿನಿಂದ ಐವತ್ತು ನೂರು ಎಮ್ಮೆಗಳು ಆದಾವು; ಆ ಎಮ್ಮೆಗಳನ್ನೆಲ್ಲಾ ಮಾರಿ, ಸಾವಿರ ಸಂಖ್ಯೇ ದ್ರವ್ಯವಂ ಘೆಳಿಸ್ಯೇನು; ಆ ದ್ರವ್ಯದಲ್ಲು ಒಳ್ಳೆ ಕುದುರೆಗಳ ಕೊಂಡೇನು; ಆ ಕುದುರೆಗಳನ್ನೆಲ್ಲಾ ಸಾಕಿ, ಒಬ್ಬ ಅರಸಿಗೆ ಕ್ರಯಕ್ಕೆ ಮಾರಲಾಗಿ, ಹತ್ತು ಎಂಟು ಸಾವಿರ ದ್ರವ್ಯ ಆದೀತು; ಆ ದ್ರವ್ಯವನ್ನೆಲ್ಲಾ ಮಹಾ ಹರದಂಗೆ ಬಡ್ಡಿಗೆ ಕೊಟ್ಟು, ಆ ಬಡ್ಡಿಯಿಂದ ಸಾವಿರ ಸಂಖ್ಯೇ ದ್ರವ್ಯವಂ ಘೆಳಿಸ್ಯೇನು; ಆ ಮೇಲೆ ಲಕ್ಷಾಂತರದ ಧನಿಕನಾದೆನು; ನಾನು ಈ ಮನೆಯಂ ಬಿಚ್ಚಿ, ಉಪ್ಪರಿಗೆ ಡವಲಾರವಂ ಕಟ್ಟ್ಯೇನು; ಮಹಾ ಧನಪತಿಯಾಗಿ, ನನಗೆ ಹುಟ್ಟಿದ ಮಗಗೆ ನಾಲ್ವರು ಹೆಂಡಿರ ಮದುವೆಯಂ ಮಾಡ್ಯೇನು; ಅದಕ್ಕೆ ಹತ್ತೆಂಟು ಮಂದಿ ಹಾರುವತಿಯರು, ಐವತ್ತು ನಾಲ್ವತ್ತು ಮಂದಿ ಗೌಡಿಯರು; ಕರುವಂಥ ಇನ್ನೂರು ಮುನ್ನೂರು ಜೀವದನ ಕರುವಿನಿಂದ ಮಹಾ ದೊಡ್ಡವನಾಗಿ ಇರುವೆನು; ತನ್ನ ಮಗನ ಹೆಂಡಿರುಗಳಿಗೆ ಒಬ್ಬ ಒಬ್ಬರಿಗೆ ಹತ್ತೆಂಟು ಮಕ್ಕಳು ಆದಾರು; ಆ ಮೊಮ್ಮಕ್ಕಳ ನಾನು ಎತ್ತಿ ಕೊಂಡು ಕುಳುತಿಪ್ಪ ಸಮಯದಲ್ಲು ಹಾಲು ಉಂಡು ಬಂದ ಎಮ್ಮೇ ಕರುಗಳು ಹಾರಿಯಾಡುತ್ತಾ ಬಂದು, ಮೊಮ್ಮಕ್ಕಳ ಹಾಯಲಾಗಿ, ನಾನು ಆಗ ಸುಮ್ಮನೇ ಇರುವೆನೇ? ನಾನು ಹಿಡಿದಿದ್ದ ಕಬ್ಬಿಣದ ಕೋಲ್ಲಿನಲ್ಲಿ ಹೊಯಿದೇನು! ಎಂದು, ಆ ಸತ್ರದ ಹಿಟ್ಟಿನ ಮಡಕೆಯಂ ಹೊಯ್ಯಲು; ಆ ಮಡಕೆಯು ಬಡೆಯಲಾಗಿ; ಆತನ ಸ್ತ್ರೀಯು ಅಂಜಿ, ಪ್ರಸೂತವಾಗಲು;

ಹತ್ತೆಂಟು ದಿವಸದ ಮೇಲೆ ಆ ಕೂಸನು ತೊಟ್ಟಿಲ ಬಳಗೆ ಮಲಗಿಸಿ, ತಾವು ಪ್ರೇಮದಿಂ ಸಾಕುವ ಮುಂಗಿಲಿಯಂ ಕರದು, ಈ ಕೂಸನು ಕಾದು ಕೊಂಡು ಇರು! ಎಂತಾ, ಹೇಳಿ, ತಾವು ಇಬ್ಬರು ಒಬ್ಬ ನೆಂಟನ ಮನೆಗಂ ಬರಲು; ಇತ್ತಲಾಗಿ ಆ ಕೂಸು ತೊಟ್ಟಿಲ ಬಳಗೆ ಮಲಗುತ್ತಿರಲಾಗಿ ಒಂದು ಸರ್ಪನು ಬಂದು, ಈ ಶಿಶುವ ಕಚ್ಚುವೆನು! ಎಂದು, ತೊಲೆಯ ಮೇಲಿನಿಂದ ಹಗ್ಗಗೊಂಡು ಬರುತ್ತಂ ಇರಲು; ಈ ಮುಂಗಿಲಿಯು ಕಂಡು, ಆ ಸರ್ಪನಂ ಕೊಂದು, ತೊಟ್ಟಿಲ ಕೆಳಗೆ ಬಿಸಾಟು, ಈ ಬ್ರಾಹ್ಮಣಂಗೆ ಹೇಳ್ಯೇನು ಎಂತಾ, ಬರುತ್ತಾ ಇರಲು; ಆ ಮೂರ್ಖನಾದ ಬ್ರಾಹ್ಮಣಂ ರಕ್ತಮಯವಾದದನ್ನು ಕಂಡು, ತನ್ನ ಶಿಶುವೈದೆ ಕೊಂದು ಬಂದಿತು! ಎಂದು, ಆ ಮುಂಗಿಲಿಯಂ ಕೊಂದು, ತನ್ನ ಗೃಹಕ್ಕಂ ಬಂದು, ಈ ಕೂಸಂ ಕಂಡು, ಈ ತುಂಡು ತುಂಡು ಆದ ಸರ್ಪನಂ ಕಂಡು, ಅವಿವೇಕದಿಂದ ಮುಂಗಿಲಿಯಂ ಕೊಂದೆನು! ಎಂದು, ಚಿಂತಿಸುತ್ತಾ ಇರಲು; ಆ ಬ್ರಾಹ್ಮಣನ ಸತಿ ಇಂತೆಂದಳು—ಕರುಣವಿಲ್ಲದೆ ಇಹುದು, ಕಾರಣವಿಲ್ಲದೆ ಜಗಳವಾಡುವದು, ಪರರ ಧನವನಪಹರಿಸುವದು, ಪರಸ್ತ್ರೀಯರ ಬೆಚ್ಚಿಕೆ ಮಾಡುವದು, ಬಂಧುಗಳಲ್ಲಿ ಬಲ್ಲಿದರಲ್ಲಿ ಸೈರಣೆಯಿಲ್ಲದೆ ಇರುವದು, ಇದು ಪಾಪಾತ್ಮರಿಗೆ ಸಿದ್ಧಾ! ಎಂದು, ಮತ್ತಿಂತೆಂದಳು—ಪರರ ಕೆಟ್ಟಾಡುವಣ, ಪರರ ಸಂಪತ್ತಿಗೆ ನೊಯ್ಯುವಣ, ಪರೋಪಕಾರಕ್ಕೆ ಅಡ್ಡಲಾಗುವಣ, ತಾನು ಆಡಿದ ಮಾತಿಗೆ ಹೋರುವಣ, ತನ್ನ ಆತ್ಮದಲ್ಲಿ ಕೃತ್ರಿಮನಾಗಿ ಇಹಣ, ಇವು ಆರು ಗು

ಣವು ದುರ್ಜನರಿಗೆ ಸಹಜವಾಗಿ ಇರುವದು; ಅದು ಕಾರಣಾ ನೀನು ವಿಚಾರಿಸದೆ ಅವಿವೇಕತನದಿಂದ ಮುಂಗಿಲಿಯಂ ಕೊಂದಿ! ಎಂದು, ಮತ್ತಿಂತೆಂದಳು—

## ೧ನೇ ಕಥೆ.

### ಪರೀಕ್ಷೆಯಿಲ್ಲದ ವೆವಹಾರಿ.

ಕಪರ್ದಿಪುರವೆಂಬ ಪಟ್ಟಣದಲ್ಲು ಮಂದಾರಕನೆಂಬ ವ್ಯವಹಾರಿಯು, ಕುದುರೆಗಳಂ ತಂದೇನು ಎಂದು, ಅನೇಕ ದ್ರವ್ಯಮಂ ತೆಗದು ಕೊಂಡು, ದ್ವೀಪಾಂತರಕ್ಕೆ ಹೋಗಿ, ಅಲ್ಲಿ ಒಬ್ಬ ಬುದ್ಧಿವಾನು ಎಂಬ ವ್ಯವಹಾರಿಯಂ ಕಂಡು—ನಾವು ಹರಿಯ ವೆವಹಾರಕ್ಕೆ ಬಂದೆವು, ಮಾರುವಂಥ ಹರಿಗಳುಂಟೇ? ಎಂದು, ಕೇಳಲಾಗಿ; ಆ ವೆವಹಾರಿಯು—ಇವನು ಮಹಾ ಮೂರ್ಖನು, ಇವನು ಅಪ್ರಬುದ್ಧನು ಎಂದು, ತಿಳಿದು, ಈತನಂ ಮಹಾ ಸ್ತುತಿ ಮಾಡಿ, ಒಂದೆರಡು ಸಾವಿರ ಮರ್ಕಟಂಗಳಂ ತರಿಸಿ, ಈತಂಗೆ ಕೊಟ್ಟು, ಈತನ ಕೈಯಲ್ಲು ಇದ್ದ ಹತ್ತೆಂಟು ಲಕ್ಷ ದ್ರವ್ಯಮಂ ತೆಗದು ಕೊಂಡು, ಕಳುಪಲಾ ಹರದಂ ಮನೋತ್ಸಾಹದಿಂದ, ಕುದುರೆಯಂ ತಂದೆನು! ಎಂದು, ತನ್ನ ಊರಿಗೆ ಬರುತ್ತಂ ಇರಲು; ಹರಿಯಲ್ಲು ಕೆಲವು ಮರ್ಕಟಗಳು ಕಾಡಿಗೆ ಓಡಿ ಹೋದವು, ಕೆಲವು ಪಂಚತ್ವವನ್ನೈದಿತು; ಈ ಮರಿಯಾದೆಯಲ್ಲು ನಷ್ಟವಾಗಿ, ಆತನನ್ನು ಕಂಡ ಕಂಡವರೆಲ್ಲಾ ನಕ್ಕು, ಅವನು ಸಾಲಕ್ಕೆ ಗುರಿಯಾಗಿ, ಮಹಾ ದರಿದ್ರನಾಗಿ, ದ್ರವ್ಯವೆಲ್ಲಾ ಹೋಯಿತು ಎಂದು, ಒಂದು ದಿವಸ ರಾತ್ರೆಯಲ್ಲು ಚಿಂತಿಸುತ್ತಂ, ಮಲಗಿ ಇರಲು; ಆ ರಾತ್ರೆಯಲ್ಲು ಮೂವರು ಯತೀಶ್ವರರು ಸ್ವಪ್ನದಲ್ಲಿ ಬರಲಾಗಿ; ಅವರನ್ನು ಕೊಲ್ಲಲಾಗಿ, ಅವರು ಚಿನ್ನದ ಸ್ವರೂಪವಹರು; ಆತನು ಉದಯದಲ್ಲೆದ್ದು, ಸ್ವಪ್ನದ ವೃತ್ತಾಂತಮಂ ಹೇಳಲು; ಅವರೆಲ್ಲಾ, ನಿನ್ನ ದ್ರವ್ಯ ಸಿಕ್ಕಿತು ಎಂದು, ಹೇಳಲಾಗಿ; ಆ ಹರದಂ, ಆ ಹಣ ಬಂದೀತೆಂದು, ಬಯಲ ಆಶೆಯಿಂದಲೇ ಚಿಂತಿಸಿ ಕೊಂಡು ಇರುತ್ತಾ ಇದ್ದನು.

ಅದು ಕಾರಣಾ ಆವದೊಂದು ಕಾರ್ಯವನ್ನು ವಿಚಾರಿಸಿ ಮಾಡ ಬೇಕು! ಎಂದು, ಹೇಳಿ, ಮತ್ತಿಂತೆಂದಳು —

## ೨ನೇ ಕಥೆ.

### ವೇಳ್ಯವ ವಿಚಾರಿಸದ ಗರ್ದಭ.

ಒಂದಾನೊಂದು ಊರಲ್ಲು ಉದ್ಧತವೆಂಬ ಕತ್ತೆ; ಅದು ಹಗಲಿನ ವೇಳ್ಯ ಅಗಸನ ಮನೆಯಲ್ಲು ದೊಡ್ಡ ಹೊರೆ ಹೊತ್ತು, ಇರುಳಲ್ಲು ತೋಟಂಗಳಂ ತಿರುಗಾಡುತ್ತಾ ಇರಲು; ಒಂದಾನೊಂದು ರಾತ್ರೆಯಲ್ಲು ಒಂದು ನರಿಯ ಸಂಗಡ ಗೆಣೆತನವಾಗಲಾಗಿ, ಅವೆರಡೂ ಬೇಲಿಗಳಂ ಕಿತ್ತು, ಸೌತೇ ಕಾಯಿಊ ತೋಟಂಗಳಂ ಪೊಕ್ಕು, ಮನಸ್ಸು ಬಂದಷ್ಟು ಕಾಯಿ ತಿಂದು, ಸೂರ್ಯೋದಯದಲ್ಲು ತಮ್ಮ ಸ್ಥಳಕ್ಕಂ ಹೋಗುತ್ತಾ ಇರಲು; ಇತ್ತಲು ಒಂದು ರಾತ್ರೆಯಲ್ಲು ಆ ಕತ್ತೆ ಒಂದು ತೋಟದ ನಡುವೆ ನಿಂತು — ಎಲೇ ತಂಗಿಯ ಮಗಾ, ಕಂಡ್ಯಾ? ಇರುಳು ಅತಿ ನಿರ್ಮಲವಾಗಿದೆ! ಅದು ಕಾರಣ ಒಂದು ಗೀತಂ ಹಾಡುವೆನು; ಯಾವ ರಾಗದಿಂದ ಹಾಡಲಿ? ಹೇಳು! ಎನಲು; ಆ ನರಿ ತನ್ನೊಳಾಲೋಚಿಸಿಕೊಂಡು — ಎಲೇ ಮಾವಾ, ಬಯಲ ಕೂಗಿನಿಂದ ಏನು? ನಾವಿಬ್ಬರು ಕಳ್ಳತನ ಮಾಡುತ್ತೇವಲ್ಲಾ? ಕಳ್ಳರೂ ಹಾದರಿಗರೂ ಸುಮ್ಮನಿರ ಬೇಕು! ಅದೆಂತೆನೆ, ಕೆಂಮ್ಮುಳ್ಳವರು ಕಳ್ಳತನವನ್ನು, ನಿದ್ರಾಲುಗಳು ಚರ್ಮಚೌರ್ಯವನ್ನು, ರೋಗಿಗಳು ನಾಲಿಗೆಯ ಸವಿಯನ್ನು ಬಿಟ್ಟು ಬಿಡ ಬೇಕು, ಇಲ್ಲದಿದ್ದರೆ ಕೆಡುವರು; ಅದು ಹೊರ್ತಾಗಿ ನಿನ್ನ ಹಾಡು ಶಂಖದ ಕೂಗಿಗೆ ಸರಿಯಲ್ಲದೆ ಇಂಪಾಗದು; ದೂರದಿಂದಲೂ ತೋಟಗಾವಲಿಯವರು ಅದಂ ಕೇಳಿ, ಎದ್ದು, ಬಂದು, ಹಗ್ಗ ಕಟ್ಟಿ, ಕೊಲೆ ಮಾಡುವರು; ಅದು ಕಾರಣದಿಂದ ಅಮೃತದಂತೆ ಸವಿಯುಳ್ಳ ಸೌತೇ ಕಾಯಿಗಳಂ ಮೆಂದು, ಇಲ್ಲಿ ಗೀತವ್ಯಾಪಾರಮಂ ಬಿಡು! ಎನಲು; ಆ ಕತ್ತೆ — ಎಲೇ ಮಿತ್ರ, ನೀನು ಕಾಡಿನಲ್ಲಿ ಬದುಕುತ್ತಿರ್ದು, ಗೀತರಸವನರಿಯೆ; ಆದ್ದರಿಂ

ದ ಹೀಗೆ ಹೇಳುತ್ತೀ; ಶರತ್ಕಾಲದ ಬೆಳದಿಂಗಳಿಂದ ಕತ್ತಲು ದೂರಕ್ಕೆ ಹೋಗಿರಲಾಗಿ ಮಿತ್ರರ ಜೊತೆಯಲ್ಲಿರುವವನ ಕಿವಿಯಲ್ಲಿ ಗೀತದ ಝೇಂಕಾರವು ಅಮೃತದಂತೆ ಬಿದ್ದರೆ ಪರಮ ಸೌಖ್ಯವಹುದೆನ್ನಲು; ಆ ನರಿ ಇಂತೆಂದುದು—ಎಲೇ ಮಾವಾ, ಅದು ಹೌದು! ಆದರೆ ನೀನು ಕಠೋರವಾಗಿ ಕೂಗುತ್ತೀ, ಅದು ಕಾರಣ ನಮ್ಮ ಕೆಲಸವಂ ಕೆಡಿಸುವ ನಾದದಿಂದೇನು? ಎನಲು; ಕತ್ತೆಯು ಉಬ್ಬಿ ಕೊಂಡು—ಛೀಛೀ, ಹೆಡ್ಡನೇ! ನಾನು ಹಾಡು ಬಲ್ಲವನಲ್ಲವೋ? ಏನು? ಅದರ ಭೇದವ ಕೇಳು! ಅದೆಂತೆನೆ, ಏಳು ಸ್ವರ, ಮೂರು ಗ್ರಾಮ, ಇಪ್ಪತ್ತೊಂದು ಮೂರ್ಛನ, ನಾಲ್ವತ್ತೊಂಭತ್ತು ತಾಳ, ಮೂರು ಮಾತ್ರೆ, ಮೂರು ಲಯ, ಯತಿಗಳ ಮೂರು ಸ್ಥಾನ, ಆರು ಆಸ್ಯ, ಒಂಭತ್ತು ರಸ, ವರ್ಣಗಳು ಇಪ್ಪತ್ತಾರು, ಭಾವಗಳು ಇಪ್ಪತ್ತನಾಲ್ಕು; ಎಂಭತ್ತೈದರ ಮೇಲೆ ನೂರೆಂಬ ಈ ಗೀತದ ಕಟ್ಟಳೆಗೆ ಸರಿಯಾಗಿ ಒಳ್ಳೆ ವರ್ಣಗಳಿಂದ ಶುದ್ಧವಾಗಿ ನಡೆಯುವಂಥಾದ್ದೇ ಗೀತವೆಂದು, ಸ್ಮೃತಿಸಿದ್ಧಾಂತವು; ಮನುಷ್ಯರಿಗೂ ದೇವತೆಗಳಿಗೂ ಹಾಡಿಗಿಂತ ಇಂಪಾಗಿ ತೋರುವಂಥಾದ್ದು ಒಂದೂ ಇಲ್ಲ! ಅದು ಕಾರಣಾ, ತಂಗಿಯ ಮಗನೇ, ಚನ್ನಾಗಿ ತಿಳಿದವನಲ್ಲವೆಂದು, ನನ್ನ ತಡೆಯುವದು ಯಾಕೆ? ಎನಲಾಗಿ; ಎಲೇ ಮಾವಾ, ಹೀಗಾದರೆ ನಾನು ಬೇಲಿಯ ಬಾಗಲಲ್ಲು ನಿಂತು, ತೋಟ ಕಾಯುವವನನ್ನು ನೋಡಿಕೊಂಡಿರುವೆನು; ನೀನು ಮನಸ್ಸು ಬಂದಷ್ಟು ಹಾಡು! ಎಂದು, ನರಿ ಹಾಗೆ ಮಾಡಲಾಗಿ; ಕತ್ತೆ ಕತ್ತನೆತ್ತಿ, ಕೂಗ ತೊಡಗಲಾಗಿ; ಆ ತೋಟ ಕಾಯುವವನು ಕತ್ತೆ ಕೂಗುವದನ್ನು ಕೇಳಿ, ಶಿಟ್ಟಿನಿಂ ಹಲ್ಲು ಕಡಿದು, ಡೊಂಣೆ ಎತ್ತಿ ಕೊಂಡು, ಓಡಿ ಬಂದು, ಕತ್ತೆಯ ನೋಡುತ್ತಲೇ ಡೊಂಣೆಯಿಂ ಬಡಿದು, ಅದು ನೆಲಕ್ಕೆ ಬಿದ್ದ ಮೇಲೆ ತೂತು ಇರುವ ಒರಳನ್ನು ಅದರ ಕತ್ತಿಗೆ ಕಟ್ಟಿ, ಮಲಗಲಾ ಕತ್ತೆಯು ಜಾತಿಗುಣದ ಪ್ರಕಾರ ಕೂಡಲೇ ನೋವ ಮರತು, ಎದ್ದು, ಒರಳನ್ನೆಳಕೊಂಡು ಬಂದು, ಬೇಲಿ ಮುರಿದು, ಓಡಿ ಹೋಗುತ್ತಂ ಇರಲು; ಆ ನರಿಯು ದೂರದಿಂದ ನೋಡಿ, ನಕ್ಕು, ಹೇಳಿದುದು—ಎಲೇ ಸೋದರಮಾವಾ, ಹಾಡಿನಿಂದ ಒಳ್ಳೇದಾಯಿತು! ನಾನು ಹೇಳಿದರೆಯೂ ನೀನು ಸುಮ್ಮನಿರಲಿಲ್ಲ; ಅಪೂ

ರ್ಣವಾದ ಈ ಮಣಿ ಕಟ್ಟಿಸಿ ಕೊಂಡಿದ್ಧೀ; ಗೀತದ ಬಿರುದು ಸಂಪ್ರಾಪ್ತವಾದುದು!

ಅದು ಕಾರಣದಿಂದ ವಿಚಾರಣೆಯಿಲ್ಲದೆ ಆವದೊಂದು ಮಾಡ ಬಾರದು; ಮಾಡಿದರೆ ಆ ಮರ್ಯಾದೆ! ಎಂದು, ಮತ್ತಿಂತೆಂದಳು—

## ೩ನೇ ಕಥೆಯ ಮೊದಲಿನ ಭಾಗ.

### ವಿಚಾರಣೆ ಇಲ್ಲದ ರಾಜ.

ಸ್ವಸ್ತಿಮತಿಯೆಂಬ ಪಟ್ಟಣದಲ್ಲು ನಂದಮಹೀಪಾಲನೆಂಬ ರಾಯಂ; ಆತಗೆ ಭಾನುಮತಿಯೆಂಬ ಸ್ತ್ರೀಯು; ಆತಂ ವಿಜಯಪಾಲನೆಂಬ ಕುಮಾರಂ ವಾಹಕನೆಂಬ ಪ್ರಧಾನಂ ಶಾರದಾನಂದನೆಂಬ ಪುರೋಹಿತಂ ಸಹಿತಂ ಸುಖದಿಂದ ರಾಜ್ಯವನ್ನಾಳುತ್ತಂ ಇರಲು; ಆ ರಾಯಂ ಸಮಸ್ತ ರಾಜ್ಯದ ಪಾರುಪತ್ಯವನ್ನು ತನ್ನ ಪ್ರಧಾನಿಗೆ ಕೊಟ್ಟು, ತಾನು ತನ್ನ ಸತಿಯೊಡನೆ ಸುಖದಿಂದ ಅಗಲದೆ ಇರುತ್ತಿರಲು; ಪರರಾಯರು ಎಲ್ಲಾ ಯೋಚಿಸಿ ಕೊಂಡು—ಈ ನಂದಮಹೀಪಾಲನೆಂಬ ರಾಯನು ಮಹಾ ಅಪ್ರಬುದ್ಧನಾಗಿ, ರಾಜ್ಯದ ಭಾರಮಂ ಪ್ರಧಾನಿಗೆ ಕೊಟ್ಟು, ವಿಚಾರಹೀನನಾಗಿ ಐಧಾನಂತೆ; ತಾವು ಹೋಗಿ, ಆ ಪಟ್ಟಣಕ್ಕೆ ಮುತ್ತಿಕೆಯಂ ಹಾಕಿ, ತೆಗದು ಕೊಂಬುವಣ ಎಂತಾ, ಆಲೋಚಿಸುತ್ತಂ ಇರಲು; ಆ ವಾರ್ತೆಯನ್ನು ಈ ವಾಹಕನೆಂಬ ಪ್ರಧಾನಿಯು ಕೇಳಿ, ರಾಯನ ಬಳಿಗಂ ಬಂದು, ಈ ರಾಜ್ಯಕಾರ್ಯಮಂ ಹೇಳಿ, ಅತ್ಯಂತ ಮುಂದಮತಿಯಲ್ಲು ಇರ ಬಾರದು! ಎಂದು, ಅನೇಕ ಪ್ರಕಾರದಿಂದ ಬುದ್ಧಿಯಂ ಹೇಳಲು; ಆ ರಾಯನು, ಗೃಹಸ್ಥನಾಗಿ ತನ್ನ ಸ್ತ್ರೀಯೊಡನೆ ಇರುವದೇ ಸೌಖ್ಯವಲ್ಲದೆ ರಾಜ್ಯದಲ್ಲಿ ಏನೂ ಪ್ರಯೋಜನವಿಲ್ಲಾ! ಎಂದು, ಹೇಳಲು; ಆ ಪ್ರಧಾನಿ ಒಡಂಬಡದಿರಲು; ರಾಯನು ಅದೇ ಮಾತನಾಡಲಾಗಿ; ಆ ಪ್ರಧಾನಿ ಅವಗೆ ಸತಿಯ ಮೇಲೆ ಇರ್ದ ಪ್ರೀತಿಯಂ ಕಂಡು, ಬೆರಗಾಗಿ, ಒಂದು ಉಪಾಯಮಂ ಕಾಣ ಬೇಕು ಎಂ

ದು, ಒಬ್ಬ ಚಿತ್ರಿಕನಂ ಕರೆದು, ಈ ರಾಯನ ರಾಣಿವಾಸದ ರೂಪಂ ಚಿತ್ರದಲ್ಲು ಬರೆ! ಎನಲು; ಆ ಚಿತ್ರಿಕಂ ಬರೆಯುತ್ತಂ ಇರಲು; ಕಾಡಿಗೆ ಹತ್ತಿದ ಮಶಿಯು ಆ ಬರವ ಚಿತ್ರದ ಪ್ರತಿಮೆಯ ಕಾಲಿನ ಮೇಲೆ ಬೀಳಲು; ಆ ಚಿತ್ರಿಕಂ ನೋಡಿ, ಮಹಾ ವ್ಯಾಕುಲಂ ಗೊಂಡು, ಅಳಸಲೋ? ಬೇಡವೊ? ಎಂಬ ಸಮಯದಲ್ಲು ಈ ಶಾರದಾನಂದನೆಂಬ ಪುರೋಹಿತಂ ಬರಲು; ಆ ಚಿತ್ರದ ಪ್ರತಿಮೆಯಂ ತೋರಲು; ಆ ಮಶಿಯ ಅಳಸಲೋ? ಬೇಡವೋ? ಎಂದು, ಕೇಳಲಾಗಿ; ಆ ಪುರೋಹಿತಂ—ರಾಣಿಗೆ ಆ ಸ್ಥಳದಲ್ಲಿ ಮಚ್ಚೆ ಉಂಟು; ಅವರ ಬಾಲ್ಯತ್ವದಲ್ಲು ನಾನು ಕಂಡದ್ದು; ಅದು ಕಾರಣದಿಂದ ಬಿದ್ದ ಮಶಿಯನ್ನು ಅಳಸ ಬೇಡಾ! ಎನಲು; ಆ ಚಿತ್ರಿಕನು ಮಹಾ ಸಂತೋಷಮಂ ಬಟ್ಟು, ಆ ಬೊಂಬೆಯ ಚಿತ್ರವ ಬರೆದು, ಪ್ರಧಾನಂಗೆ ತಂದು ಕೊಡಲಾಗಿ; ಆ ಪ್ರಧಾನಿಯು ಮಹಾ ಹರುಷಿತನಾಗಿ, ಆ ಚಿತ್ರಿಕಂಗೆ ಉಡುಗೊರೆಯಂ ಕೊಟ್ಟು, ಮನ್ನಿಸಿ, ಕಳುಹಿ, ಈ ಬೊಂಬೆಯ ರಾಯನ ಕೈಯಲ್ಲು ಕೊಟ್ಟು—ಈ ಚಿತ್ರವ ನೋಡುತ್ತಾ ರಾಜ್ಯದ ಪಾರುಪತ್ಯವ ಮಾಡು! ಎನಲು; ರಾಯನು ಆ ಚಿತ್ರವ ನೋಡಿ, ಕಾಲಿನ ಮೇಲೆ ಸಿಡಿದ ಮಶಿ ಇದೇನು? ಎಂದು, ಕೇಳಲು; ಪ್ರಧಾನನು, ನಿಮ್ಮ ರಾಣಿಗೆ ಉಂಟಾದ ಲಕ್ಷಣವೇನೋ? ಎನಲು; ರಾಯಂ ಮಹಾ ಕೋಪಮಂ ತಾಳಿ, ಆ ಚಿತ್ರಿಕನಂ ಕರಸಿ, ನೀನು ಈ ಲಕ್ಷಣಾ ಅರಿತ ಬಗೆ ಹ್ಯಾಗೆ? ಎಂದು, ಕೇಳಲು; ಎಲೇ ಸ್ವಾಮಿ, ಈ ಚಿತ್ರವ ಬರಿಯುವಾಗ್ಯೆ ಕೈ ತಪ್ಪಿ ಕಡ್ಡಿಯಿಂದ ಮಶಿಯು ಶಿಡಿದು, ಅದನ್ನು ಅಳಸಲೋ? ಎಂದು, ಅನುಮಾನಿಸುತ್ತಾ ಇರಲು; ದೇವರ ಪುರೋಹಿತ ಬಂದು, ನೋಡಿ, ಅವರಿಗೆ ಉಂಟಾದ ಲಕ್ಷಣಾ ಅಳಸ ಬೇಡ! ಎನಲು; ನಾನು ಅಳಸಲಿಲ್ಲ ಎಂದು, ಬಿನ್ನಹವಂ ಮಾಡಲು; ಆ ರಾಯಂ ಮಹಾ ಕೋಪಮಂ ತಾಳಿ, ಪುರೋಹಿತನಂ ಕರಸಿ, ಅಂತಃಪುರದ ಒಳಗೆ ಇರುವ ಸ್ತ್ರೀಯರ ಲಕ್ಷಣವನರಿತ ಪರಿ ಹ್ಯಾಗೆ? ಎಂದು, ಕೇಳಿ, ವಿಚಾರವಿಲ್ಲದೆ ಕ್ರೋಧದಿಂದ, ಆ ಪುರೋಹಿತಗೆ ಆಗ್ನೆಯ ಮಾಡು! ಎಂದು, ಹೇಳಲು; ಆ ಪ್ರಧಾನಿ ಇಂತೆಂದಂ—ಎಲೇ ಸ್ವಾಮಿ, ಪುರೋಹಿತನು ಮಹಾ ಹಿರಿಯ

ನು, ರಾಣೀ ಬಾಲ್ಯಪ್ರಾಯದಲ್ಲು ಆ ಮಚ್ಚೆ ಕಂಡು ಹೇಳಿದನಲ್ಲದೆ ಮತ್ತೊಂದು ಕಾರ್ಯವಲ್ಲ; ದೇವರು ಪರಾಂಬರಿಸಿ, ಅಪ್ಪಣೆಯ ಕೊಡ ಬೇಕು ಎಂದು, ಮತ್ತಿಂತೆಂದಂ—

## ೪ನೇ ಕಥೆ.

ಅವಿಚಾರಣೆಯಿಂದ ಕೆಡುವ ವಿಘ್ನದಲ್ಲಿದ್ದ ಹರದ.

ಮಂದಾರಪುರವೆಂಬ ಪಟ್ಟಣದಲ್ಲು ಮಂದಾರವರ್ಮನೆಂಬ ವೆವಹಾರಿಯು ಮಂದಾವತಿಯೆಂಬ ಸ್ತ್ರೀ ಸಹಿತಾ ಸುಖದಿಂದ ಇರಲು; ಒಬ್ಬ ಬ್ರಾಹ್ಮಣನು ಒಂದು ಚೀಟಿನಲ್ಲು ಒಂದು ಗ್ರಂಥಮಂ ಬರ ಕೊಂಡು, ಬಂದು, ಈ ಗ್ರಂಥಕ್ಕೆ ಸಾವಿರ ಹೊನ್ನಂ ಕೊಡುವವರುಂಟೇ? ಎಂದು, ಕೇಳಲು; ಆ ಹರದಂ ಆ ಗ್ರಂಥವಂ ನೋಡಿ ಕೊಂಡು, ಆ ಬ್ರಾಹ್ಮಣಗೆ ಸಾವಿರ ಹೊನ್ನಂ ಕೊಟ್ಟು, ಆ ಚೀಟನ್ನು ತೆಗದು ಕೊಂಡು, ತಾನು ಮಲಗುವ ಮನೆಯ ಗರ್ಭಗೃಹಕ್ಕೆ ಒಯಿದು, ಖಂಡಿಯ ಒಳಗಂ ಶಿಕ್ಕಿಸಿ, ತನ್ನ ಸ್ತ್ರೀಯ ಕೂಡ ಅನೇಕ ಕಾಲ ಸುಖದಿಂದ ಇರಲು; ಒಂದು ದಿವಸ ಈ ಹರದಂ—ಈ ಸ್ಥಳದಲ್ಲು ಏನೂ ವೆವಹಾರ ಇಲ್ಲ; ಸಮುದ್ರಾಂತ್ಯಕ್ಕೆ ಹೊಗಿ, ಬಹಳ ದ್ರವ್ಯಮಂ ತರ ಬೇಕು ಎಂದು, ತನ್ನೊಳು ಆಲೋಚಿಸಿ ಕೊಂಡು, ತನ್ನ ಸ್ತ್ರೀಗೆ ಹೇಳಿಸಿ, ಸಮುದ್ರಾಂತ್ಯದ್ವೀಪಂಗಳಿಗೆ ಹೋಗಿ, ಸಮಸ್ತ ವೆವಹಾರಮಂ ಕೇಳುತ್ತಾ, ಹತ್ತು ಇಪ್ಪತ್ತು ಕಾಲ ಪರಿಯಂತರ ಅತ್ತಲೇ ಇರಲು; ಇತ್ತಲಾ ಸ್ತ್ರೀಯು ಗಂಡು ಮಗನಂ ಹಡೆಯಲು; ಆ ಮಗಗೆ ಕೆಲವು ಕಾಲಕ್ಕೆ ಷೋಡಶ ಪ್ರಾಯವಾಗಿ, ತನ್ನ ಸ್ವತಂತ್ರದಲ್ಲು ವೆವಹಾರವ ಮಾಡುತ್ತ, ತನ್ನ ಮನೆಯಲ್ಲು ಇರಲು; ಇತ್ತಲಾ ಹರದಂ ಸಮಸ್ತ ವೆವಹಾರಮಂ ಕೊಂಡು, ಅನೇಕ ದ್ರವ್ಯಮಂ ಘಳಿಸಿ ಕೊಂಡು, ಮಹಾ ಸಂತೋಷದಿಂದ ಬಂದು—ಸ್ತ್ರೀಯರುಗಳು ಮಹಾ ಲಂಡರು, ಅವರ ನಂಬ ಬಾರದು; ತನ್ನ ಸ್ತ್ರೀಯು ಯಾವ ರೀತಿಯಲ್ಲಿ ಐದಾಳೋ? ಅದು ನೋಡ ಬೇಕು! ಎಂದು, ಕಪಟದಿಂದ ಬ್ರಾಹ್ಮಣವೇಷಮಂ ತಾಳಿ, ಮನೆಗೆ ಬಂದು,

ತಾನು ಗ್ರಾಸಾರ್ಥಿಯೆನಲು; ಆ ಸ್ತ್ರೀಯು ಈತನ ಉಪಚರಿಸಿ, ಭೋಜನವಂ ಮಾಡಿಸಿ, ಶಕುನಗಳ ಏನಾದರೂ ಬಲ್ಲಿರೇ? ಎಂದು, ಕೇಳಲು; ಈತನು ಭೂತ ಭವಿಷ್ಯದ್ವರ್ತಮಾನವ ಎಲ್ಲಾ ಬಲ್ಲೆನು ಎನಲು; ಆ ಸ್ತ್ರೀಯು—ತನ್ನ ಪತಿ ಊರಿಗೆ ಹೋಗಿ ಬಹಳ ದಿನವಾಯಿತು; ಪರಿಣಾಮದಲ್ಲಿ ಇದ್ಧಾನೋ? ಎಂದಿಗೆ ಬಂದಾನು? ಎಂದು, ಮಹಾ ದೈನ್ಯದಿಂದ ಕೇಳಲು; ಈತಂ, ತಾನು ಏನೂ ಅರಿಯದಂತೆ, ಪೂರ್ವ ವೃತ್ತಾಂತಮಂ ಹೇಳಲು; ಆ ಸತಿಯು ವಿಸ್ಮಯಂ ಬಟ್ಟು, ನೀವು ಇನ್ನು ಎಂಟು ದಿವಸ ತನ್ನ ಮನೆಯಲ್ಲು ಇರಿ! ಎಂದು, ಪರಿಣಾಮದಲ್ಲು ಇರಿಸಿ ಕೊಂಡು, ಇರಲು; ಒಂದು ದಿವಸ ಈ ಸ್ತ್ರೀಯು ತನ್ನ ಮಗನ ಕೂಡಿ ಕೊಂಡು, ಮಲಗಿ ಇರಲು; ಅದನ್ನು ಈತನು ಕಂಡು, ಮಗನೆಂದರಿಯದೆ, ಅವರ ಇಬ್ಬರ ತಲೆಯ ಹೊಯ್ಯ ಬೇಕು! ಎನಲು; ಕತ್ತಿಯಂ ತೆಗೆಯಲು; ಆ ಸಮಯದಲ್ಲು ಆ ಚೀಟಂ ಕಂಡು, ಓದಿ ಕೊಂಡನದೆಂತೆನೆ;

ಸಹಸಾ ವಿದಧೀತ ನ ಕ್ರಿಯಾಮ್; ಅವಿವೇಕಃ ಪರಮಾಪದಾಂ ಪದಂ;||
ವೃಣುತೇ ಹಿ ವಿಚಿನ್ತ್ಯ ಕಾರಣಂ; ಗುಣಲುಬ್ಧಾಃ ಸ್ವಯಮ್ ಏವ ಸಂಪದಃ||

(ಯಾವನಾನೊಬ್ಬನು ವೇಗದಿಂದ ಆವದೊಂದು ಕ್ರಿಯೆಯ ಮಾಡ ಬಾರದು; ಅವಿವೇಕನು ಮಹಾ ಆಪತ್ತಿನ ಸ್ಥಳವಾಗಿದ್ಧಾನೆ; ವಿವೇಕನು ತಕ್ಕ ಕಾರಣವನ್ನು ಬಹಳ ಚಿಂತಿಸಿ ಆರಿಸಿ ಕೊಳ್ಳುವನು; ಪುಣ್ಯ ಪ್ರೀತಿಸುವಂಥವರು ತಂಮಿಂದ ತಾವೇ ಸಂಪತ್ತುಳ್ಳವರಾಗಿದ್ಧಾರೆ.) ಈ ಶ್ಲೋಕವ ನೋಡಿ ಕೊಂಡು, ಯಾವದೊಂದು ಕಾರ್ಯವನ್ನು ವಿಚಾರಿಸಿ ಮಾಡ ಬೇಕು! ಎಂದು, ಆ ಕತ್ತಿಯಂ ಅಲ್ಲಿಯೇ ಇರಿಸಿ, ಆ ರಾತ್ರೆಯಲ್ಲು ಅಲ್ಲಿ ಮಲಗಿ ಇದ್ದು, ಆ ಮರುದಿವಸ ಬೆಳಗಾಗಿ ತಾನು ಮೊದಲು ಇದ್ದ ಸ್ಥಳಕ್ಕಂ ಹೋಗಿ, ಹರದಂ ಬಂದನೆಂದು, ಸುದ್ದಿಯಂ ಹುಟ್ಟಿಸಿ ಕೊಂಡು, ತನ್ನ ಒಡವೆ ವಸ್ತು ಸಹಿತ ಪಟ್ಟಣವಂ ಹೊಕ್ಕು, ತನ್ನ ಗೃಹಕ್ಕಂ ಬರಲು; ಈ ಮಗನು ಮಹಾ ಸಂತೋಷದಿಂದ, ತಂದೆ ಬಂದನೆಂದು, ಇದಿರ್ಗೊಂಡು, ಕರಕೊಂಡು ಬಂದು, ಮಜ್ಜನ

ಭೋಜನಾದಿಗಳಂ ಮಾಡಿಸಿ, ಚಾವಡಿಯಲ್ಲು ಕುಳಿತು ಇರಲು; ಈ ಹರದಂ ತನ್ನ ನೆಂಟರಿಷ್ಟರ ಕೂಡ, ಈತನಾರು? ಎಂದು, ಕೇಳಲು; ಅವರು ಪೂರ್ವ ವೃತ್ತಾಂತವಮಂ ಹೇಳಿ, ಈತನಿಗೋ ನಿನ್ನ ಮಗನು! ಎಂದು, ಸರ್ವರು ಹೇಳಲಾಗಿ; ಅವರಿಗೆಲ್ಲಾ ಅಪ್ಪಣೆಯಂ ಕೊಟ್ಟು, ಕಳುಹಿಸಿ, ತಾನು ತನ್ನ ಸಜ್ಜೆಗೃಹಕ್ಕಂ ಬಂದು, ಮುಂದೇ ತಾನು ಮಾಡಿದಂಥಾ ಕೃತ್ಯವಮಂ ಈ ಸ್ತ್ರೀಯ, ಮಗನ ಕೂಡ ಹೇಳಲು; ಮಹಾ ಚಿಂತಾಕ್ರಾಂತನಾಗಿ, ಸಂತೈಸಿ, ಆ ಮೇಲೆ ತನ್ನ ಸ್ತ್ರೀ ಸುತ ಬಾಂಧವರ ಕೂಡ ಸುಖದಿಂದ ಇರ್ದು, ಆ ಗ್ರಂಥವ ಬರ ಕೊಟ್ಟ ಬ್ರಾಹ್ಮಣನಂ ಕರಸಿ—ನೀನು ಬರ ಕೊಟ್ಟಂಥಾ ಗೃಂಥದ ಬೆಲೆಯಾಯಿತು; ಅದರಿಂದ ತಾನು ಬದುಕಿದೆನು ಎಂದು, ಅನೇಕ ಉಪಚಾರವಮಂ ಮಾಡಿ, ತಾನು ಘಳಿಸಿದಂಥ ದ್ರವ್ಯದ ಒಳಗೆ ಮೂರಕ್ಕೆ ಒಂದು ಪಾಲನ್ನು ಆತಗೆ ಕೊಟ್ಟು, ವಿಶೋಕದಿಂದ ಇದ್ದನು.

## ೩ನೇ ಕಥೆಯ ಎರಡನೇ ಭಾಗ.

ಆದು ಕಾರಣ ಅವಿವೇಕದಿಂದ ಒಂದೂ ಕಾರ್ಯವನ್ನು ಮಾಡ ಬಾರದು! ಎಂದು, ಪ್ರಧಾನಂ ಆ ನಂದ ಮಹಾರಾಯನ ಕೂಡೆ ಹೇಳಲು; ಆ ರಾಯಂ ಮಹಾ ಮೂರ್ಖತನದಿಂದ ಪುರೋಹಿತನಂ ಕರಸಿ, ಆಗ್ನೆಯಂ ಮಾಡಿಸಿ, ಮಹಾ ಕೋಪವಮಂ ಮಾಡಲು; ಪ್ರಧಾನಿಯು ಆ ಪುರೋಹಿತನಂ, ಹೆಡಗೈಯಂ ಕಟ್ಟಿಸಿ, ಬಹು ದೂರ ಪರಿಯಂತರ ಕರಕೊಂಡು ಹೋಗಿ, ಅಲ್ಲಿ ಕಟ್ಟಂ ಬಿಚ್ಚಿ, ಕಳುಹಿ, ಆ ಮರುದಿವಸ ರಾಯನ ಬಳಿಗಂ ಬಂದು, ಪುರೋಹಿತಗೆ ಆಗ್ನೆಯ ಮಾಡಿಸಿದೆನು ಎಂದು, ಹೇಳಿ, ಆ ರಾಯಂ ಸಂತೋಷಿತನಾಗಿ, ಕೆಲವು ಕಾಲ ಸುಖದಿಂದ ಇರಲು;

ಒಂದಾನು ಒಂದು ದಿವಸ ಈ ರಾಯನ ಕುಮಾರನು ವಿಜಯಪಾಲನು ತನ್ನ ಮಂದಿ ಕುದುರೆಯಂ ಕೂಡಿ ಕೊಂಡು, ಆ ಪುರೋಹಿತನು ಅಡಗಿ ಕೊಂಡಿರ್ದ ಅರಣ್ಯದೊಳು ಬೇಟೆಗೆ ಹೋಗಿ, ಅನೇಕ ಮೃಗತತಿಗಳಂ ಕೊಂದು, ಮಹಾ ಬಳಲಿ, ಒಂದು ವಟವೃಕ್ಷದ ನೆಳಲಿ

ಗೆ ಬರಲು; ಒಂದು ವರಾಹನು ಈ ವಿಜಯಪಾಲನ ಮುಂದೆ ಸುಳಿಯಲು; ಅದನ್ನು ಕೊಲ್ಲ ಬೇಕು ಎಂದು, ಆತನು ತನ್ನ ಕುದುರೆಯನೇರಿ ಕೊಂಡು, ಅಟ್ಟಿ ಕೊಂಡು ಹೋಗಲು; ಆ ವರಾಹಂ ತಪ್ಪಿಸಿ ಕೊಂಡು, ಒಂದು ಗುಹೆಯಲ್ಲು ಹೋಗಲು; ಈತನು ಬಳಲಿ, ಕುದುರೆಯಂ ಇಳಿದು, ಆ ಪುರೋಹಿತಂ ವಸ್ತಿಯಾಗಿದ್ದ ಸ್ಥಳದ ಬಳಿಯಲ್ಲು ಒಂದು ವಟವೃಕ್ಷದ ಕೆಳಗೆ ಮಲಗಿ ಇರಲು; ಆಗ ಅಸ್ತಮಯವಾಗಲು; ಮುಂದಿ ಕುದುರೆ ಎಲ್ಲಾ ಈತನ ಕಾಣದೆ, ರಾಯಗೆ ಏನೆಂತ ಹೇಳುವಾ? ಎಂದು, ಚಿಂತಿಸುತ್ತಂ, ಆ ರಾತ್ರೆಯಲ್ಲು ಆ ಅರಣ್ಯದಲ್ಲಿಯೇ ಇರಲು; ಇತ್ತಲು ಒಂದು ಹುಲಿಯು, ಏಳು ದಿವಸ ಉಪವಾಸ ಇದ್ದು, ಒಂದು ಕರಡಿಯಂ ಅಟ್ಟಿ ಕೊಂಡು ಬರಲು; ಆ ಕರಡಿಯು, ಹೋಗು! ಎಂದು, ಈ ಕುಮಾರ ಇರುವ ಸ್ಥಳದಲ್ಲು ಇರುವ ಮರನಂ ಹತ್ತಲು; ಆ ಕಟ್ಟಿದ ಕುದುರೆಯು ಹೆದರಿ, ಓಡಲಾಗಿ; ಈ ವಿಜಯಪಾಲನು ಮಹಾ ಭಕ್ತಿಯಿಂದ ಆ ಕರಡಿ ಇದ್ದ ಮರನ ಏರಲು; ಆ ಹುಲಿಯು ಬಂದು, ಮರನ ಕೆಳಗೆ ನಿಂತು, ಇರಲು; ಆ ಮರನ ಮೇಲೆ ಇದ್ದ ಆ ಕರಡಿಯು ಈ ರಾಜಪುತ್ರನಂ ಕರದು—ಎಲೇ ರಾಜಪುತ್ರಾ, ನೀನೇಕೆ ಅಂಜಿ ಇದ್ಧೀ? ನಾಳೆ ಸೂರ್ಯೋದಯಕ್ಕೆ ನಿನ್ನ ಊರಿಗೆ ಕಳುಹಿಸಿ ಕೊಡುವೆನು; ನೀನು ನನ್ನ ಸಮೀಪಕ್ಕೆ ಬಾ! ಎಂದು, ಆ ಕರಡಿಯು ಕರೆಯಲು; ಈ ಕುಮಾರಂ ಅದರ ಮಾತಂ ನಂಬಿ, ಅದರ ಸಮೀಪಕ್ಕಂ ಹೋಗಲು; ನೀನು ಯಾವದಕ್ಕೂ ಅಂಜ ಬೇಡ! ಎಂದು, ನಂಬುಗೆಯಂ ಕೊಟ್ಟು, ತನ್ನ ತೊಡೆಯ ಮೇಲೆ ಮಲಗಿಸಿ ಕೊಂಡು, ಇರಲು; ಈತನು ವಿಶ್ರಮದಿಂದ ನಿದ್ದೆಯ ಮಾಡಲಾಗಿ; ಕೆಳಗೆ ಇದ್ದ ಹುಲಿಯು ಕಂಡು—ಎಲೇ ಕರಡಿಯೇ, ಆ ಮನುಷ್ಯನ ಕೆಳಯಿಂಕೆ ನೂಕಿದರೆ ನಾನು ಭಕ್ಷಿಸ್ಯೇನು; ಮುಂದೆ ನಾನೂ ನೀನೂ ಎಂದಿನಂತೆ ಈ ವನಾಂತರದಲ್ಲು ಇರುವ! ಎನಲು; ಆ ಕರಡಿಯು—ನಂಬಿದವರ ಕೆಡಿಸಿದರೆ ಮಹಾ ಪಾಪ! ನೂಕುವದಿಲ್ಲ! ಎಂತಾ, ಹೇಳಿ, ಇರಲು; ಆ ಮೇಲೆ ಈ ಕುಮಾರಂಗೆ ನಿದ್ರೆ ತಿಳಿಯಲು, ಎದ್ದು ಕುಳುತಿರಲಾಗಿ; ಆ ಕರಡಿಯು, ಈತನ ಮನಸು ನೋಡ ಬೇಕು! ಎಂದು, ಎಲೇ ರಾಜಪುತ್ರಾ, ನೀನು

ಇಷ್ಟು ಹೊತ್ತು ಮಲಗಿದ್ದಿಯಲ್ಲ? ಇನ್ನು ನಾನು ಇಷ್ಟು ಹೊತ್ತು ನಿದ್ದೆಯ ಮಾಡಿಯೇನು ಎಂದು, ಕಪಟದಿಂದ ಎಚ್ಚರಿಕೆಯಲ್ಲು ಈತನ ತೊಡೇ ಮೇಲೆ ಮಲಗಿ ಇರಲು; ಕೆಳಗೆ ಇರುವ ಹುಲಿಯು ಕಂಡು— ಎಲೇ ರಾಜಪುತ್ರನೇ, ಆ ಕರಡಿಯ ಕೆಳಯಿಂಕೆ ನೂಕಿದರೆ ಭಕ್ಷಿಸುವುದೇನು? ನೀನು ನಿನ್ನ ಹಾಗೆ ಊರಿಗೆ ಹೋಗ ಬಹುದು ಎನಲು; ಆ ಮಾತಂ ಕೇಳಿ, ಆ ಕರಡಿಯ ಕೆಳಯಿಂಕೆ ನೂಕ ಕೈ ಹಾಕಲು; ಆ ಕರಡಿಯು ಎಚ್ಚರಿತು, ಎದ್ದು—ಎಲೇ ರಾಜಪುತ್ರಾ, ನಿನ್ನ ಅವಿವೇಕವ ತಾನು ಇನ್ನೂ ಬಿಡದೆ ಇಂಥಾ ಮಿತ್ರದ್ರೋಹ ಮಾಡುವರೆ ನಾನು ಮೊದಲು ಆಡಿದ ಮಾತು ತಪ್ಪುವದಿಲ್ಲ! ಎಂತ, ಹೇಳಿ, ಇರಲು; ಆ ಮೇಲೆ ಸೂರ್ಯೋದಯವಾಗಲು; ಆ ಹುಲಿಯು ತನ್ನ ಹಾಗೆ ತಾನೇ ಹೋಯಿತು; ಈ ಕರಡಿಯು ಈ ಕುಮಾರನಂ ಕೂಡಿ ಕೊಂಡು, ಕೆಳಯಿಂಕೆ ಬಂದು—ಎಲೇ ರಾಜಪುತ್ರಾ, ನೀನು ಮಿತ್ರದ್ರೋಹವ ಮಾಡಿದ್ದಕ್ಕೆ ತನ್ನ ಮನಸ್ಸಿನಲ್ಲಿ ನೋವು ಇಲ್ಲ; ಮುಂದೆ ಲೋಕದ ಪ್ರಾಣಿಗಳು ಇಂಥಾ ಮಿತ್ರದ್ರೋಹವ ಮಾಡದ ಹಾಗೆ ಅಂಜ ಬೇಕು; ಅದು ಕಾರಣ ನೀನು ಶಾಪವ ಹಿಡಿ! ಎನಲು; ಆತನು ಮಹಾ ಭೀತಿಯಿಂದ ನಡುನಡುಗುತ್ತಾ, ಮಹಾ ಪ್ರಸಾದ! ಎನಲು; ಸ ಸೇ ಮಿ ರಾ ಎಂಬ ನಾಲ್ಕು ಅಕ್ಷರವ ಹೇಳುತ್ತಾ, ಈ ವನಾಂತರದೊಳಗೆ ಭ್ರಮಿತನಾಗಿ ತಿರುಗು! ಎನಲು; ಈ ಶಾಪ ತನಗೆ ಎಂದಿಗೆ ವಿಶಾಪ? ಎಂದು, ಕೇಳಲು; ಈ ನಾಲ್ಕು ಅಕ್ಷರಕ್ಕೆ ಯಾವಾತನೂ ಶ್ಲೋಕವ ಮಾಡಿ ಓದ್ಯಾನು, ಅಂದಿಗೆ ನಿನಗೆ ವಿಶಾಪ ಎಂದು, ಹೇಳಿ, ಆ ಕರಡಿಯು ಹೋಗಲು; ಇತ್ತಲಾ ಕುಮಾರಂ ಭ್ರಮಿತನಾಗಿ, ಆ ವನಾಂತರದಲ್ಲು ಸ ಸೇ ಮಿ ರಾ ಎಂದೆಂಬ ಈ ನಾಲ್ಕು ಅಕ್ಷರವ ಹೇಳುತ್ತಾ, ತಿರುಗುತ್ತಂ ಇರಲು; ಇತ್ತಲಾ ನಂದಮಹೀಪಾಲನೆಂಬ ರಾಯಂ—ತನ್ನ ಕುಮಾರ ಬೇಂಟೆಗೆ ಹೋದನು, ಇನ್ನೂ ಬರಲಿಲ್ಲವೆಂದು, ಮಂದಿಯ ಕೂಡ—ಅರಸಿ, ಕರ ತನ್ನಿ! ಎಂದು, ಕಳುಪಲು; ಅವರು ಸುತ್ತ ನಾಲ್ಕು ದಿಕ್ಕನ್ನು ಅರಸುತ್ತಾ, ಒಂದು ವನಾಂತರದಲ್ಲು ಈತನ ಕಾಣಲು; ಈತನು ಭ್ರಮಿತನಾಗಿ, ಈ ನಾಲ್ಕು ಅಕ್ಷರವ ಹೇಳುತ್ತಾ, ತಿರುಗುತ್ತಂ ಇರಲು; ಅವ

ರು ವಿಸ್ಮಯಂ ಬಟ್ಟು, ಆತನಂ ಕರಕೊಂಡು, ಪಲ್ಲಕಿಯ ಒಳಗೆ ಕುಳಿರಿಸಿಕೊಂಡು, ಕರತಂದು, ರಾಯಂಗೆ ತೋರಲು; ಆ ರಾಯಂ ಮಹಾ ಚಿಂತಾಕ್ರಾಂತನಾಗಿ, ಈ ಭ್ರಾಂತಿ ಬಿಡಿಸುವವರುಂಟೇ? ಎಂದು, ಪ್ರಧಾನಿಯ ಕರಸಿ, ವಿಚಾರಿಸಲು; ಪ್ರಧಾನನು—ಎಲೇ ರಾಯಾ, ಈತನ ಭ್ರಮೆಯ ಬಿಡಿಸ ಬಲ್ಲಂಥವರು ಯಾರೂ ಇಲ್ಲ; ನಮ್ಮಲ್ಲಿ ಇದ್ದ ಪುರೋಹಿತಗೆ ದೇವರು ಆಗ್ನೆಯ ಮಾಡಿಸಿ ಬಿಟ್ಟರಿ, ಮುಂದೆ ಇನ್ನಾರೂ ಬಿಡಿಸುವವರು ಇಲ್ಲ ಎನಲು; ರಾಯಂ ಮಹಾ ಚಿಂತಾಕ್ರಾಂತನಾಗಿ—ತನಗೆ ಇನ್ನೇತರ ರಾಜ್ಯ? ತಾನು ಕಾಶಿಯಾತ್ರೆಗೆ ಹೋದೇನೆನಲು; ಪ್ರಧಾನಂ, ನಾಲ್ಕು ಎಂಟು ದಿವಸದ ಒಳಗೆ ವಿಚಾರಿಸಿ ಹೆಳ್ಯೇನು ಎನಲಾಗಿ; ಹಾಗಾಗಲಿ! ಎನಲು; ಪ್ರಧಾನಂ ರಾಯನ ಕೈಯ್ಯಾ ಕಳುಹಿಸಿಕೊಂಡು, ಈ ಪುರೋಹಿತನ ಬಳಿಗಂ ಬಂದು, ಈ ವೃತ್ತಾಂತಮಂ ಹೇಳಲು; ಆತಂ—ಇದೇನು ಕಾರ್ಯ ಇದ್ದೀತು? ತಾನು ಬಿಡಿಸಿ ಕೊಡುವೆನು ಎಂದು, ಹೇಳಲಾಗಿ; ಪ್ರಧಾನಂ ಮಹಾ ಸಂತೋಷಮಂ ಬಟ್ಟು, ರಾಯನ ಬಳಿಗಂ ಬಂದು—ಎಲೇ ಸ್ವಾಮಿ, ನಮ್ಮಲ್ಲಿ ಪುರೋಹಿತನ ಮಗಳು ಇದ್ದಾಳೆ; ಆಕೆ ಬಿಡಿಸ್ಯೇನೆಂದು ಹೇಳಲಾಗಿ, ನಿಮಗೆ ಹೇಳ್ಯೇನು ಎಂತ ಬಂದೆನು ಎನಲು; ರಾಯಂ ಮಹಾ ಸಂತೋಷಮಂ ಬಟ್ಟು, ಪ್ರಧಾನಿ ಸಹಿತ ಆ ಕುಮಾರನಂ ಕೂಡಿ ಕೊಂಡು, ಪ್ರಧಾನನ ಮನೆಗಂ ಬರಲು; ಆ ಪ್ರಧಾನಂ ರಾಯನ, ಪ್ರಜೆ ಪರಿವಾರವೆಲ್ಲಾ ಒಂದು ಕಡೆಯಲ್ಲು ಕುಳ್ಳಿರಿಸಿ, ನಡುವೆ ತೆರೆಯಂ ಕಟ್ಟಿಸಿ, ಆ ತೆರೆಯ ಬಳಿಯಲ್ಲು ಈ ಪುರೋಹಿತನಂ ನಿಲ್ಲಿಸಿ, ಈ ಕುಮಾರಗೆ ಸ ಸೇ ಮಿ ರಾ ಎಂಬಂಥಾದ್ದು ಏನು ಕಾರಣ ಬಂತು? ಎಂದು, ಕೇಳಲು; ಆ ಪುರೋಹಿತನು ಆ ಸ ಸೇ ಮಿ ರಾ ಎಂಬ ನಾಲ್ಕು ಅಕ್ಷರಕ್ಕೆ ಶ್ಲೋಕವ ಮಾಡಿದನದೆಂತೆನೆ—

ಸದ್ಭಾವಪ್ರತಿಪನ್ನಾನಾಂ ವಂಚನೇ ಕಾ ವಿದಗ್ಧತಾ!।
ಅಂಕಮ್ ಆರೋಪ್ಯ ಸುಪ್ತಾನಾಂ ಹನ್ತಿ; ಕಿನ್ ನಾಮ-ಪೌರುಷಂ?॥

(ಒಳ್ಳೇ ಗುಣಗಳು ಇರುವಂಥವರಿಗೆ ವಂಚನೆಯ ಮಾಡ ಬಾರದು; ಇಂತೆಂಬ ನೀತಿಯುಂಟಾಗಿ, ಆ ಕರಡಿಯು ನಿನ್ನ ತೊಡೆಯಲ್ಲು

ಮಲಗಿ ಇರಲು, ಆತನ ಘಾತಕ ಬಯಸಿ, ವ್ಯಾಘ್ರನ ಆಹಾರಕ್ಕೆ ಕೊಟ್ಟರೆ, ನಿನಗೇನು ಪೌರುಷ ಇದ್ದೀತು?) ಎಂತ, ಹೇಳಲು; ಆ ಕುಮಾರಂ ಮೊದಲಕ್ಷರವಂ ಬಿಟ್ಟು, ಸೇ ಮಿ ರಾ ಎನಲು; ಆ ಪುರೋಹಿತ ಇಂತೆಂದಂ—

ಸೇತುಂ ದೃಷ್ಟ್ವಾ ಸಮುದ್ರಸ್ಯ, ಗಂಗಾಸಾಗರಸಂಗಮೇ,||
ಬ್ರಹ್ಮಹತ್ಯಾಪಿ ಮುಚ್ಯೇತ; ಮಿತ್ರದ್ರೋಹಿ ನ ಮುಚ್ಯತೇ!||

(ಸೇತು ಕಂಡು ಸಮುದ್ರಸ್ನಾನವ ಮಾಡಿದರೆ, ಗಂಗಾಸಾಗರವ ಕಂಡರೆ, ಬ್ರಹ್ಮಹತ್ಯಾದಿ ಪಾತಕವೆಲ್ಲಾ ಪರಿಹಾರವಹುದು; ಮಿತ್ರರಿಗೆ ದ್ರೋಹವ ಮಾಡಿದ ಪಾಪ ಹೋಗದು!) ಎನಲು; ಸೇ ಎಂಬ ಅಕ್ಷರಂ ಬಿಟ್ಟು, ಮಿ ರಾ ಎನಲು; ಆ ಪುರೋಹಿತ ಇಂತೆಂದಂ—

ಮಿತ್ರದ್ರೋಹೀ ಕೃತಘ್ನಶ್ ಚ ಯಶ್ ವಿಶ್ವಾಸಘಾತಕಃ||
ತ್ರಯಸ್ ತೇ ನರಕಂ ಯಾನ್ತಿ, ಯಾವಚ್ ಚಂದ್ರದಿವಾಕರೌ!||

(ತನ್ನ ಬಂಧುಗಳಿಗೆ ದ್ರೋಹವ ಮಾಡಿದವನೂ ಉಪಕಾರವ ಮಾಡಿದವಗೆ ಅಪಕಾರವ ಮಾಡಿದವನೂ ವಿಶ್ವಾಸಘಾತಕವ ಮಾಡಿದವನೂ, ಈ ಮೂರು ಜನರು, ಸೂರ್ಯ ಚಂದ್ರರು ಇರುವಷ್ಟು ಕಾಲಕ್ಕೂ, ನರಕವ ಅನುಭವಿಸುವರು) ಎಂದು, ಹೇಳಲು; ಮಿ ಎಂಬ ಅಕ್ಷರಂ ಬಿಟ್ಟು, ರಾ ಎಂಬ ಅಕ್ಷರವ ಹೇಳುತಾ ಇರಲು; ಆ ಪುರೋಹಿತ ಇಂತೆಂದಂ—

ರಾಜನ್, ತವ ಕುಮಾರಸ್ಯ ಕಲ್ಯಾಣಂ ಚೇತ್ ತ್ವಮ್ ಇಚ್ಛಸಿ,||
ದಾನಂ ದೇಹಿ ದ್ವಿಜೇಂದ್ರಾಣಾಂ; ವರ್ಣಾನಾಂ ಬ್ರಾಹ್ಮಣೋ ಗುರುಃ||

(ಎಲೇ ರಾಯಾ, ನಿನ್ನ ಪುತ್ರಗೆ ಶುಭವಾಯಿತು; ಬ್ರಾಹ್ಮಣರುಗಳಿಗೆ ಬಹು ದಾನಧರ್ಮವ ಕೊಡ ಬೇಕು; ಮೂರು ವರ್ಣಕ್ಕೂ ಬ್ರಾಹ್ಮಣನು ಗುರುವಾಗಿದ್ದಾನೆ) ಎಂದು, ಹೇಳಲು; ಆ ಕುಮಾರಂ, ಭ್ರಾಂತಿ ಹೋಗಿ, ಸುಖದಲ್ಲಿ ಕುಳಿತು ಇರಲು; ಆ ರಾಯಂ ಸಂತೋ

ಷಮಂ ಬಟ್ಟು, ಈತನು ತನ್ನ ಪುರೋಹಿತನು! ಎಂದು, ನಿಶ್ಚಯಿಸಿ, ಆ ತೆರೆಯಂ ತೆಗಸಿ, ಆತಗೆ ಸಾಷ್ಟಾಂಗವೆರಗಿ, ಸಪ್ತಾಂಗಮಂ ಕೊಟ್ಟು, ಮನ್ನಿಸಿ, ಈ ಪ್ರಧಾನಂಗೆ ಉಡುಗೊರೆಯಂ ಕೊಟ್ಟು, ಅವರೆಲ್ಲರನ್ನು ತನ್ನ ಕುಮಾರನ ಸಹಾ ಕೂಡಿ ಕೊಂಡು, ಅತಿ ಪ್ರೇಮದಿಂದ ರಾಜ್ಯವನಾಳಿ ಕೊಂಡು, ಸುಖದಲ್ಲು ಇದ್ದನು.

ಅದು ಕಾರಣಾ ಯಾವದೊಂದು ಕಾರ್ಯವ ವಿಚಾರಿಸಿ ಮಾಡ ಬೇಕು! ಎಂದು, ಆ ಸ್ತ್ರೀಯು ತನ್ನ ಪತಿಯೊಡನೆ ಹೇಳಿ, ಸುಖದಲ್ಲು ಇದ್ದಳು.

## ಪಂಚತಂತ್ರದ ಸಮಾಪ್ತೀ ಮಾತು.

ಎಂದು, ಈ ಐದು ತಂತ್ರಗಳಂ ವಿಷ್ಣು ಶರ್ಮನೆಂಬ ಬ್ರಾಹ್ಮಣನು ಈ ಮೂವ್ವರು ಕುಮಾರರುಗಳಿಗೆ ಹೇಳಲಾಗಿ; ಅವರು ಮಹಾ ಜ್ಞಾನಸಂಪನ್ನರಾಗಿ ಇರಲು; ಈ ವಿಷ್ಣು ಶರ್ಮನೆಂಬ ಬ್ರಾಹ್ಮಣನು ಈ ಕುಮಾರರನ್ನು ಕೂಡಿ ಕೊಂಡು, ಆ ರಾಯನಲ್ಲಿಗಂ ಬಂದು, ಇವರ ಪ್ರಾಘತ್ವವನ್ನು ತೋರಿಸಲು; ಆ ರಾಯಂ ತನ್ನ ಪ್ರಧಾನನಂ ಕರದು, ತೋರಿಸಲು; ಇವರ ಪ್ರಾಘತನಮಂ ನೋಡಿ, ಅತಿ ಸಂತೋಷಮಂ ಬಡಲು; ಆ ರಾಯಂ ಈ ವಿಷ್ಣು ಶರ್ಮನೆಂಬ ಬ್ರಾಹ್ಮಣಗೆ ಸಪ್ತಾಂಗಮಂ ಕೊಟ್ಟು, ಮನ್ನಿಸಿ, ಕಳುಹಿ, ಈ ಕುಮಾರರು ಮಹಾ ಯುಕ್ತಿವಂತರಾಗಿ ಬಹು ಕಾಲ ಪರಿಯಂತರ ಸುಖದಿಂದ ರಾಜ್ಯವನಾಳಿ ಕೊಂಡು ಇರ್ದರು.

Canarese

# PANCHATANTRA

FOR THE USE OF SCHOOLS

ಕನ್ನಡ

# ಪಂಚತಂತ್ರವು

ಶಾಲೆಗಳ ಪ್ರಯೋಜನಾರ್ಥಕವಾದ್ದು

SECOND EDITION

MANGALORE
PRINTED BY PLEBST & STOLZ, BASEL MISSION PRESS
1867



